# ಹೀಗಾಗಬೇಕೇ?

ಪಡುಕೋಣೆ ಸೀತಾದೇವಿ.



ಬೆಲೆ ಆರು ಆಣೆ.

ಈ ಲೇಖಿಕೆಯ ಇನ್ನೊಂದು ಬರಹ:

**ಕಟುಕರೋಹಿಣಿ ಸಂವತ್ಸರದಲ್ಲಿ!**

(ಚಿಕ್ಕ ಪ್ರಹಸನ)

ಬೆಲೆ: ಮೂರು ಆಣೆ.

PRINTED AT THE DHARMA PRAKASH PRESS, MANG

# ಓದುವವರಿಗೆ ಎರಡು ಮಾತು.

---

ಬಹುಕಾಲದಿಂದೀಚೆಗೆ ನಮ್ಮ ದೇಶದಲ್ಲಿ ಬೇರೂರಿಕೊಂಡಿರುವ ವೇಶ್ಯಾವ್ಯವಸಾಯದ ವಿಷಯದಲ್ಲಿ ಏನಾದರೊಂದು ಬರೆಯಬೇಕೆಂಬ ಕುತೂಹಲದಿಂದಿರುವಾಗಲೇ ಶ್ರೀಯುತ **ವಿನಾಯಕ ಸದಾಶಿವ ಸುಖಟಣಕರರು** ಮರಾಠೀ "ಗೃಹಲಕ್ಷ್ಮಿ"ಯಲ್ಲಿ ಬರೆದ "ಜಾಯಿ-ಜೂಯಿ" ಎಂಬ ಕಥೆಯನ್ನು ಓದಿದೆ. ಕೂಡಲೇ ಅದನ್ನು ಕನ್ನಡಕ್ಕೆ ಪರಿವರ್ತಿಸಬೇಕೆಂಬ ಲವಲವಿಕೆಯುಂಟಾಯಿತು. ನಮ್ಮ ಕನ್ನಡ ದೇಶಕ್ಕೆ ಕಥೆಯು ಸರಿಯಾಗಿ ಅನ್ವಯಿಸುವಂತೆ ಅಲ್ಲಲ್ಲಿ ಕೆಲವು ತಿದ್ದುಪಡಿಗಳನ್ನು ಮಾಡಿ ಅದನ್ನು ಕನ್ನಡಕ್ಕೆ ಪರಿವರ್ತಿಸಿದೆ. ಇದೇ ಇಲ್ಲಿ ಪ್ರಕಟಿಸಿದ ಕಥೆಯ ಜನ್ಮವು.

ನಮ್ಮ ಸಮಾಜದ ಅವನತಿಗೆ ಇಂದು ವೇಶ್ಯಾವೃತ್ತಿಯೇ ಒಂದು ಪ್ರಮುಖವಾದ ಕಾರಣವು ವೇಶ್ಯೆಯರ ಉದ್ಧಾರವೇ ದೇಶೋದ್ಧಾರದ ಪ್ರಥಮ ಸೋಪಾನವೆಂದು ನಾನು ನೆನಸುತ್ತೇನೆ. ಸನ್ಮಾರ್ಗವನ್ನು ಅನುಸರಿಸಲು ಮನಸ್ಸಿದ್ದರೂ ವೇಶ್ಯಾಬಾಲಿಕೆಯರು ವೇಶ್ಯಾವೃತ್ತಿಯ ಅಗ್ನಿಕುಂಡದಲ್ಲಿ ತಮ್ಮ ಬಲಿದಾನವನ್ನು ಹೇಗೆ ಮಾಡುವರೆಂಬುದೇ ಈ ಕಥೆಯ ತಿರುಳಾಗಿದೆ

ಈ ಕಥೆಯನ್ನು ಕನ್ನಡದಲ್ಲಿ ಪರಿವರ್ತಿಸಲು ಸಂತೋಷದಿಂದ ಅಪ್ಪಣೆಕೊಟ್ಟ ಶ್ರೀಯುತ **ವಿನಾಯಕ ಸದಾಶಿವ ಸುಖಟಂಕರ**ರಿಗೆ ನಾನು ತುಂಬಾ ಅಭಾರಿಯಾಗಿರುವೆನು. ಅದಲ್ಲದೆ ಇದನ್ನು ಮೊದಲು ತಮ್ಮ "ವಸಂತ" ಪತ್ರಿಕೆಯಲ್ಲಿ ಪ್ರಕಟಿಸಿ ಆ ಮೇಲೆ ತಮ್ಮ "ವಸಂತ ಪುಷ್ಪಮಾಲೆ"ಯ ಒಂದು ಪುಷ್ಪವನ್ನಾಗಿ ಮಾಡಿಕೊಂಡಿರುವ ಶ್ರೀಯುತ ಕೋಟ ಶಿವರಾಮ ಕಾರಂತರಿಗೂ ನನ್ನ ಅಭಿನಂದನಗಳನ್ನು ಅರ್ಪಿಸಬೇಕಾಗಿದೆ. ಈ ಪುಸ್ತಕವನ್ನು ಅಷ್ಟು ಮುದ್ದಾಗಿ ಪ್ರಕಟಿಸಿ ಕೊಟ್ಟಿರುವ ಮಂಗಳೂರು ಸ್ವರ್ಣಪ್ರಕಾಶ ಛಾಪಖಾನೆಯವರನ್ನೂ ನಾನು ಈ ಸಮಯದಲ್ಲಿ ಮರೆಯೆ.

ಇದು ನನ್ನ ಮೊದಲ ಪ್ರಯತ್ನವೆಂದು ನಾನು ಬೇರೆ ಹೇಳಬೇಕಾಗಿಲ್ಲ. ಮೊದಲ ಪ್ರಯತ್ನದ ದೋಷಗಳೆಲ್ಲ ಇದರಲ್ಲಿ ಇದ್ದೇ ಇರಬೇಕು. ಆದರೂ ಬಲ್ಲವರು ಕಥೆಯ ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡು ದೋಷಗಳನ್ನು ಕ್ಷಮಿಸುವರೆಂದು ನಂಬುವೆನು. ಈ ನನ್ನ ಪ್ರಯತ್ನವು ಸಫಲವಾದರೆ ನಾನು ಬರೆದಿರುವ ಇನ್ನೂ ಒಂದೆರಡು ಪುಟ್ಟ ಕೃತಿಗಳನ್ನು ಪ್ರಕಟಿಸಬೇಕೆಂದಿರುವೆ.

ಮಂಗಳೂರು,
೨೦ನೇ ಜೂನ್ ೧೯೨೯.

ಇತಿ ನಿಮ್ಮ ಸಹೋದರಿ,
**ಪ. ಸೀತಾದೇವಿ.**

# "ಹೀಗಾಗಬೇಕೇ!"

೧

ಸೂರ್ಯನು ಮುಣುಗುವ ಸಮಯ. ಅದರಲ್ಲೂ ಈ ಹೊತ್ತು ಸೋಮವಾರವಾದುದರಿಂದ ಶ್ರೀ ಮಹಾ ಲಿಂಗೇಶ್ವರ ದೇವಸ್ಥಾನದಲ್ಲಿ ಗೊಂದಲವೇ ಗೊಂದಲ! ಜನರು ಬಂದು ಶ್ರೀನಾಥನಿಗೆ ಹಣ್ಣು ಕಾಯಿಗಳನ್ನು ಕೊಡುವುದೂ, ಹೋಗುವುದೂ ಬರುವುದೂ ಇದೇ ಇಂದಿನ ಕೋಲಾಹಲಕ್ಕೆ ಕಾರಣವಾಗಿತ್ತು. ಈ ಸಮ ಯದಲ್ಲಿ ಸಾಧಾರಣ ಹದಿನೊಂದು ವರ್ಷದ ಬಾಲಿಕೆ ಯೊಬ್ಬಳು "ಚಂಪಕೆ!" ಎಂದು ಕರೆಯುತ್ತಾ ಇಡೀ ದೇವಸ್ಥಾನವನ್ನು ಹುಡುಕಾಡಿದಳು. ಯಾವಾಗಲೂ ಆ ಇಬ್ಬರು ಗೆಳತಿಯರು ಆಡುವ ಸ್ಥಳವೇ ಅದಾ ಗಿತ್ತು. ಆದರೆ ವ್ಯರ್ಥ! ಕಡೆಗೆ ನಿರಾಶಳಾಗಿ ದೇವಾ ಲಯದ ಎಡಗಡೆಯಲ್ಲಿ ಸಮೀಪವೇ ಇದ್ದ ತನ್ನ ಮನೆಗೆ ಹೊರಟಳು. ಅಲ್ಲಿ ಕೆರೆಯ ಸೋಪಾನಗಳೊಂದ ರಲ್ಲಿ ಕುಳಿತಿದ್ದ ತನ್ನ ಗೆಳತಿ ಚಂಪಕೆಯನ್ನು ಕಂಡಳು. ಅವಳಿಗೆ ಅತ್ಯಾನಂದವಾಯಿತು! "ಕೆರೆ ಬಳಿಯಲ್ಲಿ ನಾವು ಯಾವಾಗಲಾದರೂ ಆಡಿದ್ದಿಲ್ಲ. ಅಂದಮೇಲೆ

ಚಂಪಕೆಯು ಅಲ್ಲಿರಲು ಕಾರಣವೇನು?" ಎಂದು ತನ್ನನ್ನೇ ಕೇಳಿಕೊಳ್ಳುತ್ತಾ ಅವಳಿದ್ದಲ್ಲಿಗೆ ನಡೆದಳು. ಅಷ್ಟರಲ್ಲಿ ಏನಾದರೊಂದು ವಿನೋದವಾಡಬೇಕೆಂದು ಅಲ್ಲೇ ನಿಂತು ಬಿಟ್ಟಳು. ಪುನಃ ನಾಲ್ಕು ಹೆಜ್ಜೆ ಮುಂದು ವರಿದಳು. ಬೆನ್ನು ಹಾಕಿ ಕುಳಿತಿದ್ದ ಚಂಪಕೆಯ ಕಣ್ಣು ಗಳೆರಡನ್ನೂ ತನ್ನ ಕೈಯಿಂದ ಮುಚ್ಚಿಬಿಟ್ಟಳು. ಕೂಡಲೇ ಕೈಗಳನ್ನು ತೆಗೆದು ಬಿಟ್ಟಳು! . . . . . . ಚಂಪಕೆಯ ಕಣ್ಣುಗಳಿಂದ ಅಶ್ರುಪ್ರವಾಹವೇ ಹರಿಯುತ್ತಿತ್ತು! ಮಲ್ಲಿಕೆಯು ಅವಳ ಹತ್ತಿರ ಕುಳಿತು "ಚಂಪಕೆ! ಇದೇನು, ಕೆರೆಯ ಹತ್ತಿರ ನೀನಿದ್ದುದನ್ನು ತಿಳಿಯದೆ ನಿನ್ನನ್ನು ಹುಡುಕಿ ಹುಡುಕಿ ಬೇಸತ್ತೆನು. ನೀನು ಏತಕ್ಕೆ ಅಳುತ್ತಿ?. . . . . . . ಚಂಪಕೆ, ನನ್ನೊಡನೆ ಹೇಳಲಾರೆಯಾ?" ಎಂದಳು.

ಈ ಪ್ರೇಮ ಭರಿತವಾದ ಮಾತುಗಳನ್ನು ಕೇಳಿ ಚಂಪಕೆಯ ದುಃಖವು ಅನಿವಾರವಾಯಿತು. ಅ..ಳಾ ದರೂ ತನ್ನ ದುಃಖದ ಕಾರಣವನ್ನು ಮಲ್ಲಿಕೆಯೊಡ ನಲ್ಲದೆ ಇನ್ನಾರೊಡನೆ ಹೇಳಬೇಕು? ಮನಸ್ಸಿನ ವ್ಯಥೆ ಯು ಅಂತ್ಯಂತ ಪ್ರಿಯರಾದವರೊಡನೆ ಹೇಳಿದರೆ ಸ್ವಲ್ಪವಾದರೂ ಕಡಿಮೆಯಾಗುವುದಲ್ಲವೆ? ಹೀಗಾಗಿ ಚಂಪಕೆಯು ತನ್ನ ಗೆಳತಿಯೊಡನೆ "ಮಲ್ಲಿಕೆ! ಈ ಹೊತ್ತು ಅಮ್ಮನು ನನ್ನನ್ನು ವಿನಾಕಾರಣ ಹೊಡೆದಳು! ನಾನು

ಮನೆಯಿಂದ ಹೊರಟು ಅವಸರದಿಂದ ನೀನಿದ್ದಲ್ಲಿ ಬರುತ್ತಿರುವಾಗ ಮೆಟ್ಟಲನ್ನೆಡವಿ ದೊಪ್ಪನೆ ಬಿದ್ದೆ. ಬಿದ್ದ ಶಬ್ದಕ್ಕೆ ತೊಟ್ಟಿಲಲ್ಲಿ ಮಲಗಿದ್ದ ಚಂದ್ರಿಯು ಎದ್ದು ಅಳಲಾರಂಭಿಸಿದಳು. ನಾನು ಬೇಗನೆ ಹೋಗಿ ತೊಟ್ಟಿಲನ್ನು ತೂಗುವಷ್ಟರಲ್ಲಿ ಅಂಗಳದಲ್ಲಿ ಏನೋ ಕೆಲಸದಲ್ಲಿದ್ದ ಅಮ್ಮನು ಬಂದು ಬೆತ್ತದಿಂದ ನನ್ನನ್ನು ಹೊಡೆದೇ ಬಿಟ್ಟಳು. ನಿಜವಾದ ಸಂಗತಿಯನ್ನು ಹೇಳಲು ನನಗೆ ಸಮಯ ಕೊಡಲಿಲ್ಲ" ಎಂದು ಗದ್ಗದ ಕಂಠದಿಂದ ಹೇಳಿ ಸುಮ್ಮಗಾದಳು. ಮಲ್ಲಿಕಗೆ ಬಹಳ ದುಃಖವಾಯಿತು. ಚಂಪಕೆಯ ಮೈಯಲ್ಲಿ ಬೆತ್ತದಿಂದುಂಟಾದ ಗುರುತುಗಳನ್ನು ನೋಡಿದಳು ಇದನ್ನು ನೋಡಿದ ಮೇಲಂತೂ ಸಹಿಸಲಾರದೆ ಮಲ್ಲಿಕೆಯೂ ಅಳಲಾರಂಭಿಸಿದಳು ಚಂಪಕೆಯು ಕೂಡಲೆ ತನ್ನ ದುಃಖವನ್ನು ಮರೆತು ಮಲ್ಲಿಕೆಯ ಕೈಯನ್ನು ಹಿಡಿದು —"ನೀನೇತಕ್ಕೆ ಹೀಗೆ ಅಳುವಿ? ನಿನಗ..ತಹ ಕಷ್ಟವೇನು ಬಂದಿರುವುದು? ಸುದೈವದಿಂದ ನಿನ್ನ ಅಮ್ಮನು ನಿನ್ನನ್ನು ಬಹಳ ಮುದ್ದಿನಿಂದ ಸಾಕಿದ್ದಾಳೆ. ನನಗೆ ಮಲತಾಯಿ ಇದ್ದುದರಿಂದ ಈ ಕಷ್ಟಗಳು ಬರಲು ಕಾರಣವಾಯಿತು! ನೀನು ಅಳಬೇಡವಮ್ಮ" ಎಂದಳು.

ಇದನ್ನು ಕೇಳಿ ಮಲ್ಲಿಕೆಯು -"ಚಂಪೀ! ನಾನೇಕೆ ಅಳುತ್ತಿರುವೆನೆಂಬುದು ನನಗೇ ಗೊತ್ತಿಲ್ಲ.

ನೀನು ಎಂದಾದರೂ ಕಷ್ಟಪಟ್ಟುದನ್ನೂ ದುಃಖದಲ್ಲಿ ರುವುದನ್ನೂ ಕಂಡರೆ ನನಗೆ ವ್ಯಥೆಯಾಗುವುದು. ನೀನು ಅತ್ತರೆ ನನಗೂ ಅಳುಬರುವುದು. . . . ಈಗ ನಾವಿಬ್ಬರೂ ನಮ್ಮ ಮನೆಗೆ ಹೋಗೋಣವೇ? ಅಮ್ಮನು ನಮಗೆ ತಿನ್ನಲಿಕ್ಕೆ ಕೊಡುವಳು" ಎಂದಳು.

ಚಂಪೆಗೆ ಮಲತಾಯಿಯೊಬ್ಬಳಿದ್ದುದರಿಂದ ಇಂತಹ ಹಲವು ತರದ ಪ್ರಸಂಗಗಳು ಬರುತ್ತಿದ್ದುವು. ಆದರೆ ಕೂಡಲೆ ಗೆಳತಿಯಾದ ಮಲ್ಲಿಕೆಯ ತಾಯಿಯು ಇವಳನ್ನು ಸಂತೈಸಿ ಪ್ರೀತಿಯಿಂದ ಕಾಣುತ್ತಿದ್ದಳು. "ನೀನು ಅತ್ತರೆ ನನಗೂ ಅಳು ಬರುವುದು" ಎಂಬೀ ಮಾತುಗಳೇ ಮಲ್ಲಿಕೆಗೆ ಚಂಪೆಯ ಮೇಲಿದ್ದ ಅಲೌಕಿಕ ಪ್ರೇಮವನ್ನು ವಿಶದಗೊಳಿಸುತ್ತಿದ್ದುವು.



ನಾಲ್ಕೈದು ದಿವಸಗಳಿಂದೀಚೆ ಮಹಾಲಿಂಗೇಶ್ವರ ದೇವಸ್ಥಾನದಲ್ಲಿ ಬಹಳ ಗಲಾಟೆ! ನಾಳೆಯೇ ಮಹಾ ಲಿಂಗೇಶ್ವರನ ರಥೋತ್ಸವ! ಸುತ್ತು ಮುತ್ತಲಿನ ಹಳ್ಳಿ ಯಿಂದ ಜನರು ಗುಂಪುಗುಂಪಾಗಿ ಬರುತ್ತಲೇ ಇದ್ದರು. ವಿನೋದಿಗಳೂ, ಭಕ್ತರೂ, ಕುತರ್ಕಿಗಳೂ ಎಲ್ಲಾ ಮಾದರಿಯ ಜನರೂ ಬರುತ್ತಿದ್ದರು. ಹೋಟೇಲುಗಳ ಲ್ಲಿಯೋ, ದೇವಸ್ಥಾನದಲ್ಲಿಯೋ, ತೂಗು ತೊಟ್ಟಿಲ ಲ್ಲಿಯೋ, ಕಂಚಿನ ಅಂಗಡಿಗಳಲ್ಲಿಯೋ, ಮಣಿಸರಕಿನ

ಅಂಗಡಿಗಳಲ್ಲಿಯೋ, ಎಲ್ಲಿ ನೋಡಿದರೂ ಸ್ತ್ರೀಪುರುಷ ಬಾಲಬಾಲಕಿಯರ ಗುಂಪು ಕಾಣುತ್ತಿತ್ತು. ಒಂದು ಕಡೆ ಮಕ್ಕಳ ಕೂಗು, ಒಂದು ಕಡೆ ತೂಗು ತೊಟ್ಟಿಲಿನ ಕಿರೀಂ ಕಿರೀಂ ಶಬ್ದ, ಒಂದು ಕಡೆ ಮಕ್ಕಳ ರಾಗದ ಮಾಲೆ ಮೊದಲಾದ ಆಟದ ಸಾಮಾನುಗಳಿಂದುಂಟಾಗುವ ಕೂಗು. ಇವೇ ಮೊದಲಾದುವುಗಳಿಂದ ಕಿವಿಗಳು ರಥೋತ್ಸವವಾಗುವವರೆಗೆ ಬೇಡವೆನಿಸುತ್ತಿದ್ದುವು. ಎಲ್ಲಿ ನೋಡಿದರೂ ಆನಂದವೇ ಆನಂದ! ಉಲ್ಹಾಸವೇ ಉಲ್ಹಾಸ! ಆದರೆ ಚಂಪಕೆ ಮಲ್ಲಿಕೆಯರಿಗೆ ಮಾತ್ರ ಸಂತೋಷವಿರಲಿಲ್ಲ!

ಮಲ್ಲಿಕೆಯ ತಾಯಿ ಗಿರಿಜೆಯು ದೇವಸ್ಥಾನದ ದೇವದಾಸಿಯಾಗಿದ್ದಳು. ತಾರುಣ್ಯಾವಸ್ಥೆಯಲ್ಲಿ ಅವಳು ಬೇಕಾದ ಧನಸಂಗ್ರಹವನ್ನು ಮಾಡಿದ್ದುದರಿಂದ ಉದರಪೋಷಣೆಗೋಸ್ಕರ ಅವಳಿಗೆ ದೇವಸ್ಥಾನದ ಸೇವೆಯನ್ನು ಮಾಡುವ ಅಗತ್ಯವಿರಲಿಲ್ಲ. ಆದರೂ ವಂಶಪಾರಂಪರ್ಯದಿಂದ ನಡೆದು ಬಂದ ಈ ಸೇವೆಯನ್ನು ವೃಥಾ ಅಲಕ್ಷಮಾಡಲು ಅವಳ ಮನಸ್ಸು ಒಡಂಬಡಲಿಲ್ಲ. ಹಲವು ವರ್ಷಗಳಿಂದೀಚೆ ಅವಳಪಾಲಿಗೆ ಬಂದ ದೇವಸ್ಥಾನದ ಕೆಲವು ನಿತ್ಯನಿಯಮದ ಕೆಲಸಗಳನ್ನು ಅವಳು ಭಕ್ತಿಯಿಂದ ಮಾಡುತ್ತ ಬಂದಿದ್ದಳು. ಮೇಲಾಗಿ ರಥೋತ್ಸವದ ಸಮಯದಲ್ಲಿ ಹೂ ತರುವುದು,

ಹೂ ಕಟ್ಟುವುದು, ದೇವರ ಉಪಕರಣಗಳನ್ನು ಸ್ವಚ್ಛವಾಗಿ ತೊಳೆಯುವುದು, ದೇವಸ್ಥಾನದ ಪ್ರಾಕಾರ ದೊಳಗೆ ಗುಡಿಸುವುದು, ಇವೇ ಮೊದಲಾದ ಹಲವು ಕೆಲಸಗಳಿದ್ದುವು. ಹೊತ್ತಿಗೆ ಸರಿಯಾಗಿ ಈ ಕೆಲಸ ಗಳನ್ನು ಮಾಡಬೇಕಾದುದರಿಂದ ಸಹಾಯಕ್ಕಾಗಿ ಮಗಳನ್ನೂ ಕರೆಯುತ್ತಿದ್ದಳು. ಆದಕಾರಣ ಮೂರು ನಾಲ್ಕು ದಿನಗಳಿಂದೀಚೆ ಮಲ್ಲಿಕೆಗೆ ಚಂಪೆಯ ದರ್ಶನ ವೇ ಆಗಲಿಲ್ಲ. ದಿವಸದಲ್ಲಿ ಒಂದಾವರ್ತಿಯಾದರೂ ಅವಳನ್ನು ಕಂಡು ಸುಖದಿಂದ ಆಡುತ್ತಾ ಮಾತನಾಡು ತ್ತಾ ಇರದಿದ್ದರೆ ಮಲ್ಲಿಕೆಗೆ ಮನಸ್ಸೇ ಚಂಚಲವಾಗು ತ್ತಿತ್ತು. ಆದರೂ ಸ್ವಲ್ಪ ಸಮಯ ಸಿಕ್ಕಿತೆಂದರೆ ಮಲ್ಲಿ ಕೆಯು ಗೆಳತಿಯಿದ್ದೆಡೆಗೆ ಓಡುವಳು. ಈ ಹೊತ್ತು ಗಿರಿ ಜೆಯ ಕೆಲಸವು ಬೇಗನೆ ಮುಗಿದುದರಿಂದ ಮಲ್ಲಿಕೆಯು ಹರ್ಷಚಿತ್ತದಿಂದ ಚಂಪೆಯ ಮನೆಗೆ ಹೋಗುತ್ತಿದ್ದಳು. ಆದರೆ ಮಾರ್ಗದಲ್ಲಿಯೇ ಡೊಂಬರಾಟವನ್ನು ನೋ ಡುತ್ತ ನಿಂತಿದ್ದ ಚಂಪೆಯನ್ನು ನೋಡಿ "ಬಾ ಆಡೋಣ" ಎಂದು ಕರೆದಳು. ಮಲ್ಲಿಕಯನ್ನು ನೋಡುತ್ತಲೇ ಚಂಪೆಯು ಓಡಿ ಬಂದು, "ಮಲ್ಲಿಕೆ! ನಿನಗೊಂದು ತಮಾಷೆ ಹೇಳುವುದಿದೆ ಅದನ್ನು ಹೇಳಲು ಎರಡು ದಿನಗಳಿಂದ ನಾನು ನಿನ್ನ ದಾರಿ ನೋಡುತಿದ್ದೆನು. ಆದರೆ ನಿನ್ನ ಭೇಟಿಯೇ ಇಲ್ಲ. ನೀನಿಲ್ಲದೆ ದೇವಸ್ಥಾ

ನದ ಕಾರ್ಯವು ಮುಗಿಯುವುದಿಲ್ಲವೆ? ಇರಲಿ, ಆ ತಮಾಷೆಯ ಸಂಗತಿಯನ್ನು ನಾನು ನಿನಗೆ ಹೇಳುವುದೇ ಇಲ್ಲ, ನೋಡು" ಎಂದು ಸ್ವಲ್ಪ ಸಿಟ್ಟು ಬಂದಂತೆ ನಟಿಸಿದಳು.

"ಸುಮ್ಮನೆ ಸುಳ್ಳು ಸಿಟ್ಟನ್ನು ಕರೆಯಬೇಡ. ಸ್ವಲ್ಪ ಹೊತ್ತಿನ ಮೇಲೆ ನೀನಾಗಿಯೇ ಹೇಳುವೆ. ಆಗ ನಾನು ಮಾತ್ರ ಕೇಳಲಿಕ್ಕಿಲ್ಲ!" ಎಂದು ಮಲ್ಲಿಕೆಯು ನಸುನಗುತ್ತಾ ಹೇಳಿದಳು.

ಎರಡು ದಿನಗಳಿಂದಲೂ ಕಷ್ಟದಿಂದ ಒತ್ತಿ ಇಟ್ಟುಕೊಂಡ ಆ ಸಂಗತಿಯನ್ನು ಯಾವಾಗ ಮಲ್ಲಿಕೆಯ ಹತ್ತಿರ ಹೇಳಲೆಂಬ ಕುತೂಹಲದಿಂದಿದ್ದ ಚಂಪೆಯು ಸುಳ್ಳು ಆಡಂಬರವನ್ನು ಬಿಟ್ಟು, "ಮಲ್ಲಿಕೆ! ಹೇಳುತ್ತೇನೆ. ಆದರೆ ಆ ಕೆರೆಯ ಬಳಿ ಮೊದಲು ಹೋಗುವ. ಇಲ್ಲದಿದ್ದರೆ ಪ್ರೇಮಾ, ದುರ್ಗಾ, ಹೀರಾ ಇವರೆಲ್ಲರೂ ಬಂದು ನಮ್ಮನ್ನು ಸುತ್ತಿ ತೊಂದರೆ ಕೊಟ್ಟಾರು" ಎಂದಳು.

ಇಬ್ಬರೂ ಕೆರೆಯ ಬಳಿ ಕುಳಿತುಕೊಂಡರು. ಚಂಪೆಯು ಆ ತಮಾಷೆಯ ಸಂಗತಿಯನ್ನು ಹೇಳಲು ಮೊದಲುಮಾಡಿದಳು:— "ಮೊನ್ನೆ ಸಭಾಮಂಟಪದಲ್ಲಿ ನಾರಾಯಣ ಪುರೋಹಿತರು ಪಲ್ಲಕ್ಕಿಯನ್ನು ಶೃಂಗರಿಸುತ್ತಿದ್ದರು. ಆ ಸಮಯದಲ್ಲಿ ಅವರ ಎಡಗಡೆಯಿದ್ದ ಕಂಬಕ್ಕೆ

ಒರಗಿ ಒಬ್ಬ ಮುದುಕಗ್ರುಹಸ್ಥನು ಎವೆಯಿಕ್ಕದೆ ನನ್ನನ್ನು ನೋಡುತ್ತಾ ಮಧ್ಯದಲ್ಲಿ ಆಗಾಗ್ಗೆ ಎಲೆಯಡಿಕೆ ಜಗ್ಗುತ್ತಾ ಕೂತಿದ್ದನು! ಅವನು ಎಷ್ಟು ಬಲಿಷ್ಟನಿದ್ದನೆಂದು ಗೊತ್ತೇ? ನಾನು ಹೇಳುವುದಿಲ್ಲ. ಅವನ ಒಂದೊಂದು ಕಾಲು ಒಂದು ಕಂಬದಷ್ಟು ದಪ್ಪ! ಅವನ ಉಡಿಗೆತೊಡಿಗೆಯ ಅಂದವನ್ನೇನೆಂದು ಹೇಳಲಿ! ಐದು ಬೆರಳುಗಳಷ್ಟು ಅಗಲ ಜರಿಯಂಚಿನ ಧೋತರ, ದೊಡ್ಡ ಗುಂಡಿಗಳುಳ್ಳ ಕಾಲುವರೆಗಿನ ಒಂದು ಕೋಟು, ಇವೇ ಮೊದಲಾದ ಉಡಿಗೆತೊಡಿಗೆಗಳ ಬೆಡಗೇ ಬೆಡಗು. ನನ್ನನ್ನು ನೋಡಿದ ಕೂಡಲೇ ನನಗೆ ಯಾಕೋ ಬಹಳ ಲಜ್ಜೆಯಾಯಿತು ನಾನು ಅಲ್ಲಿಂದ ಪಲಾಯನ ಮಾಡಿ ಹೊರಗೆ ತುಲಸೀವನದ ಹತ್ತಿರ ಬಂದು ನಿಂತೆನು. ಆದರೆ ನೋಡುವುದೇನು? ನನ್ನ ಹಿಂದೆಯೇ ಆ ವೃದ್ಧನೂ ತನ್ನ ದೇಹವನ್ನು ನೂಕಿಕೊಂಡು ನನ್ನ ಹತ್ತಿರವೇ ಬಂದು ನಿಂತುಬಿಟ್ಟದ್ದಾನೆ! ನನ್ನ ಸಮೀಪವೇ ಬಂದು, 'ನೀನು ಯಾರು? ಹೆಸರೇನು? ಮನೆಯೆಲ್ಲಿ?' ಇವೇ ಮೊದಲಾದ ಅನೇಕ ಪ್ರಶ್ನೆಗಳನ್ನು ಒಂದರ ಹಿಂದೆ ಒಂದು ಕೇಳತೊಡಗಿದನು. ನಾನು ಮರುಮಾತನಾಡದೆ ಅಲ್ಲಿಂದ ಒಂದೇ ಸವನೆ ಓಡಿಬಂದು ಮನೆಸೇರಿದೆ!"

ಇಷ್ಟು ಹೇಳಿದ ಅನಂತರ ಗೆಳತಿಯರಿಬ್ಬರೂ ಹೊಟ್ಟೆತುಂಬಾ ನಗಲಾರಂಭಿಸಿದರು. ಆದರೆ ಮಧ್ಯ

ದಲ್ಲೇ ಪುನಃ ಚಂಪೆಯು, 'ಇಷ್ಟರಲ್ಲೇ ಮುಗಿಯಲಿಲ್ಲ! ಮರುದಿನ ಪುರೋಹಿತರು ನಮ್ಮ ಮನೆಗೆ ಬಂದು ಅಪ್ಪನ ಕೂಡೆ ಏನೇನೋ ಪಿಸಿ ಪಿಸಿ ಮಾತನಾಡಿ, ಹೋಗುವಾಗ 'ನಿಮ್ಮ ಹಿತಕ್ಕೋಸ್ಕರವೇ ಹೇಳಿದೆ. ಆಲೋಚನೆ ಮಾಡಿರಿ' ಎಂದು ಹೇಳಿ ಹೋದರು. ಅನಂತರ ಸಾಯಂಕಾಲ ಪುನಃ ಪುರೋಹಿತರೂ ಆ ವೃದ್ಧ ಪಿತಾಮಹರೂ ಬಂದರು! ಬಹಳ ಹೊತ್ತಿನ ವರೆಗೆ ಅಪ್ಪನೂ ಅವರಿಬ್ಬರೂ ಮಾತನಾಡುತ್ತಾ ಇದ್ದರು. ಏನೆಂದು ಮಾತ್ರ ನನಗೆ ತಿಳಿಯಲಿಲ್ಲ. ಆದರೆ ರಾತ್ರಿ ಅಪ್ಪನೂ, ಮಲತಾಯಿಯೂ ಮಾತ ನಾಡುತ್ತಿರುವಾಗ ಕೇಳಿದೆ. 'ಹುಡುಗನು ದೊಡ್ಡ ಮನೆತನದವನು. ಐಶ್ವರ್ಯವಂತೂ ಹೇಳುವುದೇ ಬೇಡ ಮನೆಯಲ್ಲಿ ಸ್ವತಃ ಮೋಟರಕಾರು ಇದೆ! ಮುದುಕನನ್ನು ಕಂಡರೆ ಅವನ ಮಗನೂ ಒಳ್ಳೇ ಶೀಲ ವಂತನಿರಬೇಕೆಂದು ಕಾಣುತ್ತೆ. ಆದರೆ ಮೈಸೂರಷ್ಟು ದೂರ ಹುಡುಗಿಯನ್ನು ಕೊಡಬೇಕೆಂಬುದೇ ಒಂದು ಚಿಂತೆ' ಎಂದು ಹೇಳಿದನು ಅದಕ್ಕೆ ಅಮ್ಮನು 'ಊರು ದೂರವಾದರೇನು? ನೆಂಟಸ್ತಿಕೆಯಂತೂ ಚಿನ್ನದಂಥದ್ದು. ವರವಮಾನವಿಲ್ಲದೆ, ಪೈಖರ್ಚುಮಾಡದೆ ಆಗುವ ಇಂತಹ ಸಂಬಂಧವನ್ನು ಬಿಟ್ಟರೆ ಮುಂದಕ್ಕೆ ಬಹಳ ತೊಂದರೆ ಯಾದೀತು. ಮದುವೆಮಾಡಿ ಬಿಡೋಣ. ಅವಳು

ದೂರ ಹೋದರೇನು! ನನ್ನ ಕಮಲೆ, ವಿಮಲೆ, ವತ್ಸಲೆ, ಚಂದ್ರಿ ಇವರು ಇದ್ದಾರಲ್ಲವೇ?' ಎಂದು ಹೇಳಿದಳು. ಇನ್ನೂ ಬಹು ಹೊತ್ತಿನ ತನಕ ಅವರ ಸಂಭಾಷಣೆಯು ನಡಿಯುತ್ತಾ ಇತ್ತು. ನನಗೆ ಮಾತ್ರ ನಿದ್ದೆ ಹತ್ತಿತು.' ಎಂದು ಹೇಳಿ ಚಂಪೆಯು ಮಲ್ಲಿಕೆಯೊಡನೆ "ಬೇಗನೆ ಮದುವೆಯ ಸಂಭ್ರಮವು ಬಂದರೆ ನಾನು ನಿನ್ನನ್ನು ಬಿಟ್ಟು ಹೋಗಬೇಕಲ್ಲವೇ? ನನ್ನ ಇಚ್ಛಾನುಸಾರ ವಾಗಿ ಏಕೆ ಮದುವೆ ಮಾಡಲೊಲ್ಲರು?" ಇವೇ ಮೊದಲಾದ ಅನೇಕ ಪ್ರಶ್ನೆಗಳನ್ನು ಹಾಕಿದಳು. ಗೆಳತಿಯರಿಬ್ಬರೂ ಈ ಪ್ರಶ್ನೆಗಳ ಉತ್ತರವನ್ನು ಹುಡುಕ ಲಾರಂಭಿಸಿದರು. ಬರೇ ಹತ್ತು ಹನ್ನೊಂದು ವರ್ಷ ಪ್ರಾಯದ ಆ ಚಿಕ್ಕ ಮಕ್ಕಳ ಬುದ್ಧಿಗೆ ಅದೆಲ್ಲಿಂದ ಹೊಳೆ ದೀತು? ಆಲೋಚನೆ ಮಾಡುತ್ತಾ ಮಾಡುತ್ತಾ ಅವ ರಿಗೆ ಕತ್ತಲೆಯಾದುದೂ ತಿಳಿದುಬರಲಿಲ್ಲ! ಕಡೆಗೆ ದೇವ ಸ್ಥಾನದಲ್ಲಿ ಹೊಡೆದ ನಗಾರಿಯ ಶಬ್ದಕ್ಕೆ ಫಕ್ಕನೆ ಎಚ್ಚತ್ತು ತಮ್ಮ ತಮ್ಮ ಮನೆಗೆ ಹೋದರು.

೩

ಎರಡು ಮೂರು ದಿನಗಳು ಕಳೆದುವು. ದೇವ ಸ್ಥಾನದ ರಥೋತ್ಸವ ಮುಗಿದು ಎಲ್ಲೆಲ್ಲಿಯೂ ಶಾಂತ ತೆಯು ಹಬ್ಬಿತು. ಮೊಕ್ತೇಸರರು ಈ ವರ್ಷ ದೇವ ರಿಗೆ ಕಾಣಿಕೆಗಳೇನೇನು ಬಂದಿವೆ, ಧನಸಂಗ್ರಹವೆಷ್ಟು?

ಎಂದು ಲೆಕ್ಕಾಚಾರವನ್ನು ನೋಡುತ್ತಲಿದ್ದರು. ದೇವಸ್ಥಾನದ ಸುತ್ತಲಿದ್ದ ಎಲ್ಲಾ ಅಂಗಡಿಗಳೂ ಮಾಯವಾಗಿದ್ದುವು. ಕಂಚಿನ ಸಾಮಾನಿನ ಅಂಗಡಿಯೊಂದು ಇನ್ನೂ ಅಲ್ಲೇ ಕಂಗೊಳಿಸುತ್ತಿತ್ತು.

ಏಳೆಂಟು ದಿನಗಳಿಂದ ಕೆಲಸ ಮಾಡಿ ದಣಿದ ಗಿರಿಜಾಬಾಯಿಯು ಈ ಹೊತ್ತು ವಿಶ್ರಾಂತಿಯನ್ನು ತೆಗೆದುಕೊಳ್ಳುತಿದ್ದಳು. ಅಂತೆಯೆ ಮಲ್ಲಿಕೆಗೂ ತನ್ನ ಗೆಳತಿಯೊಡನೆ ಕಾಲಹರಣಮಾಡಲು ಸಮಯ ದೊರಕಿತು. ಅವಳು ಕೂಡಲೇ ತನ್ನ ಗೆಳತಿಯ ಮನೆಗೆ ಓಡಿಹೋದಳು ಆ ದಿನದ ಸಂಭಾಷಣೆಯಾದ ಅನಂತರ ಅವರು ತಿರಿಗಿ ಭೇಟಿಯಾಗಿರಲಿಲ್ಲ. ಆದುದರಿಂದ ಇಬ್ಬರೂ ಒಬ್ಬರನ್ನೊಬ್ಬರು ನೋಡಲು ಆತುರವುಳ್ಳವರಾಗಿದ್ದರು.

ಜಗುಲಿಯ ಮೇಲೆ ಅಕ್ಕಿಯನ್ನು ಹೆಕ್ಕುತ್ತಾ ಕುಳಿತ್ತಿದ್ದ ಚಂಪೆಯನ್ನು ಮಲ್ಲಿಕೆಯು ನೋಡಿದಳು. ಆದರೆ ಅವಳು ಎಂದಿನಂತೆ ಲಂಗಾ ಹಾಕಿಕೊಳ್ಳದೆ ದೊಡ್ಡದೊಂದು ಜರತಾರಿ ಸೀರೆಯನ್ನು ಉಟ್ಟಿದ್ದನ್ನು ನೋಡಿ ಮಲ್ಲಿಕೆಗೆ ನಗುವು ಬಂದೇ ಬಿಟ್ಟಿತು. ಅವಳು ನಕ್ಕ ಧ್ವನಿಯನ್ನು ಕೇಳಿದ ಕೂಡಲೇ ಚಂಪೆಯು ತಲೆಯೆತ್ತಿ ನೋಡಿ ನಕ್ಕಳು. ಚಂಪೆಯು ಪ್ರಕಾಶವಾಗಿ ನಕ್ಕರೂ ಮನಸ್ಸಿನೊಳಗಿದ್ದ ಚಿಂತೆಯ ಛಾಯೆಯು ಅವಳ ಮುಖದಲ್ಲಿ ತಲೆದೋರುತ್ತಿತ್ತು. ಇದು ಮಲ್ಲಿ

ಕೆಯ ಲಕ್ಷ್ಯಕ್ಕೆ ಬಂತು. ಅವಳು ಗೆಳತಿಯ ಹತ್ತಿರವೇ ಕುಳಿತುಕೊಂಡು "ಏನೆ! ಇಷ್ಟರಲ್ಲಿಯೇ ಮದುವಣ ಗಿತ್ತಿಯಾಗಿದ್ದೀಯೆ?" ಎಂದು ಕೇಳಿದಳು. ಚಂಪೆಯು ಮೆಲ್ಲಗೆ, "ಅಹುದು ಇನ್ನು ಮುಂದೆ ಲಂಗಾಹಾಕಿ ಕೊಳ್ಳಬಾರದೆಂದು ಅಮ್ಮನ ಅಪ್ಪಣೆಯಿದೆ. ಸೀರೆಯ ನ್ನು ಸರಿಯಾಗಿ ಉಡಲು ಕಲಿಯಬೇಕಂತೆ" ಎಂದಳು. "ಅದೇಕೆ?" ಎಂದು ಮಲ್ಲಿಕೆಯು ಕೇಳಲು, ಚಂಪೆಯು "ನನಗೆ ಲಗ್ನ ನಿಶ್ಚಯವಾಯಿತು ನಾಡದು ನಾವೂ ಪುರೋಹಿತರೂ ಮದುವೆಗೋಸ್ಕರ ಮೈಸೂರಿಗೆ ಹೋಗು ತ್ತೇವೆ" ಎಂದುತ್ತರ ಕೊಟ್ಟಳು. ಮಲ್ಲಿಕೆಯು "ಅದೇನೆ ಇಷ್ಟು ಅವಸರ?" ಎಂದು ಕೇಳಿದಳು ಚಂಪೆಯು ಉತ್ತರಗೊಡುಗ ಒಂದು ನಿಟ್ಟುಸುರನ್ನು ಬಿಟ್ಟಳು.

ಕಡೆಗೆ ಮಲ್ಲಿಕೆಯು "ಚಂಪೇ! ನಿನ್ನ ತಾಯಿ ತಂದೆಗಳು ನಿನ್ನನ್ನು ಇಷ್ಟು ಬೇಗ ಏಕೆ ಮದುವೆ ಮಾಡುತ್ತಾರೆ? ನೀನೇನೂ ಅಷ್ಟು ದೊಡ್ಡವ ಳಾಗಿಲ್ಲ. ಎರಡು ತಿಂಗಳ ಹಿಂದೆ ನಿನ್ನ ದೊಡ್ಡಪ್ಪ ನ ಮಗಳಿಗೆ ಮದುವೆಯಾಯಿತಲ್ಲವೆ? ಅವಳು ಎಷ್ಟು ದೊಡ್ಡವಳಾಗಿದ್ದಳು! ನೀನು ಅವಳ ಕತ್ತಿಗೆ ಎಟುಕು ವಷ್ಟು ಕೂಡ ಎತ್ತರ ಇಲ್ಲವಲ್ಲ!" ಎಂದು ರಭಸದಿಂದ ಹೇಳಿದಳು. ಇದುವರೆಗೆ ನಿಧಾನವಾಗಿ ಮಾತನಾಡು

ತ್ತಿದ್ದುದರಿಂದ ಅವರ ಸಂಭಾಷಣೆಯು ಯಾರಿಗೂ ಕೇಳಿರಲಿಲ್ಲ. ಆದರೆ ಮಲ್ಲಿಕೆಯ ರಭಸದ ಮಾತುಗಳು ಮುಗಿದೊಡನೆ ಚಂಪೆಯ ಮಲತಾಯಿಯು ಅಡಿಗೆ ಮನೆಯೊಳಗಿಂದ ಆಡಿದ ಕರ್ಕಶವಾದ ಮಾತುಗಳು ಕೇಳಲಾರಂಭಿಸಿದುವು "ಚೋಟುದ್ದದ ಈ ಪೋರಿಗೆ ದೊಡ್ಡ ಅಜ್ಜಿಯಂತೆ ಮಾತುಕತೆಗಳಾಡಲು ಎಲ್ಲಿಂದ ಬರುತ್ತದೆಯಪ್ಪಾ! ಅದರಲ್ಲೂ ಹಿತೋಕ್ತಿಗಳು! ನನಗಿಂತ ಇವಳಿಗೇನೇ ಚಂಪೆಯ ಯೋಚನೆ ಜಾಸ್ತಿ· ಇದ್ದಂತೆ ತೋರುತ್ತಿದೆ. ಜಾತಿಯ ಗುಣಗಳು ಬರುತ್ತವೆ ಎಂದು ಹೇಳುತ್ತಾರೆ. ಅದು ಸುಳ್ಳಲ್ಲ" ಎಂದು ಚಂಪೆಯ ಮಲತಾಯಿಯು ಒಂದೇ ಸವನೆ ಹೇಳಲಾರಂಭಿಸಿದಳು.

ಇದನ್ನು ಕೇಳಿ ಮಲ್ಲಿಕೆಯು ಭಯದಿಂದ ನಡುಗಲಾರಂಭಿಸಿದಳು ಪಲಾಯನಮಾಡಬೇಕೆಂದಿರುವಷ್ಟರಲ್ಲಿ ಆ ಮಹಾಮಾಯೆಯು ಅಡಿಗೆಕೋಣೆಯಿಂದ ಧಡಧಡನೆ ಹೊರಗೆ ಬಂದು "ಏನೆ, ಹಾದರಗಿತ್ತಿ! ಚಂಪೆಗೆ ಮದುವೆಮಾಡದೆ ನಿಮ್ಮ ಕುಲಾಚಾರದಂತೆ ವರ್ತಿಸಿ ಮನೆಯಲ್ಲಿಟ್ಟುಕೊಳ್ಳಬೇಕೆಂದು ಹೇಳುವಿಯಾ?" ಎಂದು ಗರ್ಜಿಸಿದಳು. ಮಲ್ಲಿಕೆಯು ಮಾತೆತ್ತದೆ ತನ್ನ ಮನೆಗೆ ಓಡಿದಳು.

ಅಜ್ಞಾನದಿಂದ ತಾನು ಆಡಿದ ಮಾತಿಗಾಗಿ ತನ್ನ ಗೆಳತಿಗೂ ಎಷ್ಟು ಕಷ್ಟಗಳು ಬರುತ್ತವೆಯೋ ಎಂದು

ಮಲ್ಲಿಕೆಯು ಮನಸ್ಸಿನಲ್ಲಿ ಬಹಳವಾಗಿ ಹಂಬಲಿಸಿದಳು. ಇನ್ನು ಮುಂದೆ ಚಂಪೆಯನ್ನು ಕಂಡು ಅವಳೊಡನೆ ಪ್ರೇಮದಿಂದ ಮಾತುಗಳನ್ನಾಡಲು ಕೂಡ ಅವಳಿಗೆ ಎಡೆಯಿಲ್ಲದಂತಾಯಿತು. ಚಂಪೆಯಂತೂ ಮದುವಣಗಿತ್ತಿಯಾದುದರಿಂದ ಹೊರಗೆ ಬರುವ ಹಾಗಿಲ್ಲ. ಉಳಿದ ಎರಡು ದಿನಗಳಲ್ಲಾದರೂ ಅವಳೊಡನೆ ದೇವಸ್ಥಾನದ ಸಮೀಪವಿರುವ ಆಲದಮರಕ್ಕೆ ತೂಗ ಹಾಕಿದ್ದ ಉಯ್ಯಾಲೆಯಲ್ಲಿ ಕುಳಿತುಕೊಳ್ಳಬೇಕು, ಹಾಡುಗಳನ್ನು ಹೇಳಬೇಕು ಎಂದು ಮಲ್ಲಿಕೆಯು ಬಹಳವಾಗಿ ಹವಣಿಸಿದಳು. ಆದರೆ ಚಂಪೆಯ ಮನೆಯಲ್ಲಿ ನಡೆದ ಸಂಗತಿಯು ನೆನಪಾದ ಕೂಡಲೇ ಅವಳ ಆಸೆಯು ಅಲ್ಲಿಯೇ ಮಾಯವಾಗಿ ಹೋಗುತ್ತಿತ್ತು.

ಚಂಪೆಯ ಮಲತಾಯಿಯ ಮಾತುಗಳು ಅವಳ ಒಡಲನ್ನು ಚುಚ್ಚಿದುವು. ತನ್ನದೆಂಥ ದುಷ್ಟವಂಶವಪ್ಪಾ ಎಂದವಳು ಶೋಕಿಸ ತೊಡಗಿದಳು.

ಸಿಟ್ಟಿನ ಭರದಲ್ಲಿ ಹೇಳಿದ ಮಾತುಗಳು ಎಲ್ಲಿಯವರೆಗೆ ಹೋದಾವೆಂದು ನಮಗೆ ಸಾಧಾರಣವಾಗಿ ತಿಳಿಯುವುದಿಲ್ಲ. ಮಲ್ಲಿಕೆಯ ಮೇಲಿನ ಕ್ರೋಧದಿಂದ ಚಂಪೆಯ ಮಲತಾಯಿಯು ಆ ಮಾತುಗಳನ್ನು ಆಡಿದ್ದೇನೊ ನಿಜವು. ಆದರೆ ಮಲ್ಲಿಕೆಯ ಮನಸ್ಸಿನಲ್ಲಿ ಮಾತ್ರ ಅವುಗಳ ಪರಿಣಾಮವು ವಿಪರೀತವಾಯಿತು. ಇತರ

ಜಾತಿಯ ಬಾಲಕಿಯರು ವಿವಾಹವಾಗಿ ಅವರ ಪತಿಯ ಮನೆಯನ್ನು ಸೇರುವರು; ಆದರೆ ತನ್ನ ಜಾತಿಯಲ್ಲಿ ಈ ಪದ್ಧತಿಯು ಇಲ್ಲವೆಂದು ಅವಳಿಗೆ ಈ ವರೆಗೂ ತಿಳಿದಿರಲಿಲ್ಲ ಈ ಎರಡರಲ್ಲಿ ಯಾವುದೊಳ್ಳೆಯದೆಂದು ಆಲೋಚಿಸುವ ಶಕ್ತಿಯೂ ಅವಳಲ್ಲಿರಲಿಲ್ಲ ಆದರೂ ಆ ಹೆಂಗಸಿನ ಕಠೋರವಾದ ಮಾತುಗಳು ಅವಳ ಹೃದಯದಲ್ಲಿ ಎರಕ ಹೊಯಿದಂತೆ ತುಂಬಿ ಹೋದುವು.

೪

ಎರಡು ಮೂರು ದಿನಗಳು ಕಳೆದುವು. ಚಂಪೆಯ ಮನೆಯವರು ಮೈಸೂರಿಗೆ ಹೊರಡಲು ಸಿದ್ಧರಾದರು. ಮಧ್ಯಾಹ್ನ ಮೂರು ಘಂಟೆ ಸಮಯಕ್ಕೆ ಅವರ ಮನೆ ಬಾಗಿಲಲ್ಲಿ ಎರಡು ಬಂಡಿಗಳು ಬಂದು ನಿಂತವು. ಇದನ್ನು ನೋಡಿದ ಮಲ್ಲಿಕೆಯು ತನ್ನ ಮನೆಯಿಂದ ಹೊರಗೆ ಬಂದಳು. ಸಾಧಾರಣ ಅರ್ಧ ಘಂಟೆಯ ತನಕ ಅವಳು ಚಂಪೆಯ ಮಾರ್ಗ ನಿರೀಕ್ಷಣೆಮಾಡುತ್ತಾ ನಿಂತಳು. ಅವಳ ಮನಗೆ ಹೋಗಿ ಅವಳನ್ನು ನೋಡಿ, ಅವಳೊಡನೆ ಮಾತನಾಡಬೇಕೆಂಬ ಕುತೂಹಲವು ಅವಳಿಗೆ ಬಹಳವಾಗಿತ್ತು ಆದರೆ ಚಂಪೆಯ ಮುಲತಾಯಿಗೆ ಅಂಜಿ ಅಲ್ಲಿಯೇ ನಿಂತಳು. ಸುಮಾರು ಹೊತ್ತಿನ ಮೇಲೆ ಚಂಪೆಯೂ ಮನೆಯಲ್ಲಿನ ಇತರ ಸಂಬಂಧಿ

ಕರೂ ಹೊರಗೆಬಂದರು. ನೆರೆಕರೆಯವರೆಲ್ಲರೂ ಮದುವಣಗಿತ್ತಿಯನ್ನು ನೋಡುವುದಕ್ಕಾಗಿ ಆಗಲೇ ಬಂದಿದ್ದರು ಕೆಲವು ವಯಸ್ಸಾದ ಸ್ತ್ರೀಯರು, ಹೆಣ್ಣಿನ ಕಡೆಯವರು ಮದುವೆಯ ಸಮಯದಲ್ಲಿ ಯಾವ ರೀತಿಯಿಂದ ನಡೆಯಬೇಕು, ಗಂಡಿನ ಕಡೆಯವ ರೊಡನೆ ಯಾವ ಯಾವ ಸಂದರ್ಭಗಳಲ್ಲಿ ಜಗಳಾಡ ಬೇಕು, ಗಂಡಿನ ಕಡೆಯವರು ಜಗಳಾಡಿದರೆ ಎಲ್ಲಿಯ ತನಕ ಮೌನ ತಾಳಬೇಕು ಎಂಬೀ ವಿಷಯಗಳನ್ನೆಲ್ಲಾ ಚಂಪೆಯ ಚಿಕ್ಕಮ್ಮನಿಗೆ ಹೇಳುತ್ತಿದ್ದರು. ಆದರೆ ಅವಳು ಎಲ್ಲವೂ ತನಗೆ ಗೊತ್ತಿದ್ದಂತೆ ನಟಿಸುತ್ತಿದ್ದಳು ಕೆಲವರು ಚಂಪೆಗೂ ಅನೇಕ ತರದ ಬುದ್ಧಿವಾದಗಳನ್ನು ಹೇಳುತ್ತಿದ್ದರು. ಅದನ್ನು ಅವಳು 'ಹೂಂ' ಗುಟ್ಟುತ್ತಾ ಕೇಳುತ್ತಿದ್ದರೂ ಅವಳ ದೃಷ್ಟಿಯು ಮಾತ್ರ ಈಗ ಬಂಡಿ ಯ ಬಳಿ ಬಂದಿರುವ ಮಲ್ಲಿಕೆಯ ಕಡೆಗೆ ಓಡಿದ್ದಿತು ಆ ಸ್ತ್ರೀಯರ ಉಪದೇಶಪರವಾದ ಭಾಷಣಗಳಿಗಿಂತಲೂ ತನ್ನ ಗೆಳತಿಯ ಕೂಡೆ ಸ್ವಲ್ಪ ಹೊತ್ತಾದರೂ ಮಾತ ನಾಡಲು ಸಂದರ್ಭವು ದೊರೆತ್ತಿದ್ದರೆ ಉತ್ತಮವಾಗಿ ತ್ತೆಂದು ಅವಳು ಭಾವಿಸುತ್ತಿದ್ದಳು. ಆದರೆ ಚಿಕ್ಕಮ್ಮ ನನ್ನು ನೋಡಿ ಹಿಂಜರಿಯಬೇಕಾಯಿತು. ಏಕೆಂದರೆ ಅವಳು ಕ್ಷಣಕ್ಷಣಕ್ಕೂ ಕಣ್ಣುಗಳನ್ನು ವಿಶಾಲಮಾಡಿ ಇವಳನ್ನು ಬಿರಬಿರನೆ ನೋಡುತ್ತಿದ್ದಳು.

ಸ್ವಲ್ಪ ಹೊತ್ತಿನ ಮೇಲೆ ಚಂಪೆಯ ತಂದೆ ಜಯವಂತರಾಯನೂ, ಇನ್ನು ಇವನ ಬೀಯಗನಾಗಲಿಕ್ಕಿರುವ ಶ್ರೀನಿವಾಸರಾಯನೂ, ನಾರಾಯಣ ಪುರೋಹಿತರೂ ಹೊರಗೆ ಬಂದು ಬಂಡಿಯಲ್ಲಿ ಕುಳಿತುಕೊಂಡರು. ಚಂಪೆಯೂ, ಅವಳ ತಂಗಿಯರೂ, ಚಿಕ್ಕಮ್ಮನೂ ಹಿಂದಿನ ಬಂಡಿಯಲ್ಲಿ ಕುಳಿತರು. ಹೊತ್ತು ಮೀರಿದುದರಿಂದ ಬಂಡಿಯನ್ನು ವೇಗವಾಗಿ ಹೊಡೆಯಲಿಕ್ಕೆ ಹೇಳಿದರು. ಗಾಡಿಗಳು ಚಲಿಸಲಾರಂಭಿಸಿದುವು. ಕೂಡಲೇ ಈ ತನಕ ದೂರದಲ್ಲಿ ನಿಂತಿದ್ದ ಮಲ್ಲಿಕೆಯು ಚಂಪೆಯು ಕುಳಿತಿದ್ದ ಗಾಡಿಯ ಹಿಂದೆಯೇ ಹೋದಳು "ಚಂಪೇ! ಹೋಗುವಿಯಾ?" ಎಂದು ಗದ್ಗದಿತ ಕಂಠದಿಂದ ಕೇಳಿದಳು ಚಂಪೆಯು ಕಣ್ಣೀರನ್ನು ಸುರಿಸುತ್ತ "ಅಹುದು" ಎಂದಳು. "ಇನ್ನು ಹಿಂದಿರುಗಿ ಯಾವಾಗ ಬರುತ್ತಿ?" ಎಂದು ಮಲ್ಲಿಕೆಯು ಕೇಳಲು ಏನುತ್ತರಕೊಡಬೇಕೆಂದು ಚಂಪೆಗೆ ತಿಳಿಯಲಿಲ್ಲ. ಅಷ್ಟರೊಳಗೆ ಚಂಪೆಯ ಚಿಕ್ಕಮ್ಮನು "ನಿಮ್ಮ ಸುಖಗೋಷ್ಟಿಗಳು ಇನ್ನೂ ಮುಗಿಯಲಿಲ್ಲವೇ?" ಎಂದು ಸಿಟ್ಟಿನಿಂದ ಕೇಳಿದಳು. ಇದನ್ನು ನೋಡಿ ಮಲ್ಲಿಕೆಯು ಸ್ವಲ್ಪ ದೂರ ಸರಿದಳು. ಕೂಡಲೇ ಚಂಪೆಯು ತಾನು ಬಚ್ಚಿಟ್ಟದ್ದ ಚಿಕ್ಕದೊಂದು ಎಲೆಯ ಬುಟ್ಟಿಯನ್ನು ತವಕದಿಂದ ಮಲ್ಲಿಕೆಯ ಕೈಯಲ್ಲಿಟ್ಟಳು. ಅದರಲ್ಲೇ

ನಿರಬಹುದು? ಮಾವು, ಪೇರಳೆ, ನೇರಳೆ, ಗೇರು ಹಣ್ಣುಗಳು! ತನ್ನ ಮನೆಯ ಹಿಂದುಗಡೆಯಿದ್ದ ಗುಡ್ಡ ವನ್ನೆಲ್ಲಾ ಸುತ್ತಿ ಗೆಳತಿಗಾಗಿ ತನ್ನ ಪ್ರೀತಿಯ ಕೊನೆಯ ಕಾಣಿಕೆಯಾಗಿ ಚಂಪೆಯು ಇವನ್ನು ಅಣಿಮಾಡಿದ್ದಳು! ಬಂಡಿಗಳು ಮುಂದುವರಿದುವು...... ..

ಬಹಳ ಹೊತ್ತಿನವರೆಗೆ ಮಲ್ಲಿಕೆಯ ದೃಷ್ಟಿಯು ಬಂಡಿಯಲ್ಲಿದ್ದ ಚಂಪೆಯ ಮೇಲೆಯೇ ಇತ್ತು. ಚಂಪೆ ಯಾದರೂ ಇವಳನ್ನೇ ರೆಪ್ಪೆಹಾಕದೆ ನೋಡುತ್ತಿದ್ದಳು. ಕಡೆಗೆ ಬಂಡಿಯು ಕಣ್ಣಡ್ಡವಾದುದರಿಂದ ಮಲ್ಲಿಕೆಯು ನಿರಾಶಳಾಗಿ ಕಂಬನಿಗೆರೆಯುತ್ತಾ ಮನೆಗೆ ಹಿಂತಿರು ಗಿದಳು

೫

ಚಂಪೆಯ ಮದುವೆ ಮುಗಿದು ಅವಳ ತಂದೆ ಚಿಕ್ಕಮ್ಮ ಮೊದಲಾದವರು ಪುನಃ ಊರಿಗೆ ಬಂದರು. ಚಂಪೆಯು ಮಾತ್ರ ಪತಿಗೃಹದಲ್ಲಿಯೇ ನಿಂತಳು. ಹಲವು ದಿನಗಳ ವರೆಗೆ ಲಗ್ನದ ಸಮಾರಂಭ, ಬೀಯಗರ ಐಶ್ವರ್ಯದ ವರ್ಣನೆ, ಬಾಯಿಬಡಿಕಿಯಾದ ಬೀಗ ತಿಯ ಮಾತುಗಳಿಂದ ತಾನು ಪಾರಾದ ಚಾತುರ್ಯ, ಇವೇ ಮೊದಲಾದ ವಿಷಯಗಳ ಕುರಿತು ಚಂಪೆಯ ಚಿಕ್ಕಮ್ಮನು ಆಡಿದ ಮಾತುಗಳಿಂದ ಮುಕ್ತಪುರದ ಊರ ನಿವಾಸಿಗಳಿಗೆ ಹೊತ್ತು ಕಳೆಯಲು ಸುಲಭವಾ

ಗುತ್ತಿತ್ತು. ಮಲ್ಲಿಕೆಯ ತಾಯಿ ಗಿರಿಜಾಬಾಯಿಯು ಮನೆಯೊಳಗೆ ಅನೇಕ ಸಲ ಸ್ನೇಹಿತರ ಕೂಡೆ ಮಾತನಾಡುತ್ತಿದ್ದುದನ್ನು ಮಲ್ಲಿಕೆಯು ಕೇಳಿದ್ದಳು ಆವರೆ ತನ್ನ ಗೆಳತಿಯ ಸಂಬಂಧವಾಗಿ ಏನೂ ಕೇಳದೆ ಇದ್ದುದರಿಂದ ಅವಳಿಗೆ ಸ್ವಲ್ಪ ಅತೃಪ್ತಿಯುಂಟಾಯಿತು. ' ಈ ಹೊತ್ತು, ನಾಳೆ, ಅವಳು ತವರು ಮನೆಗೆ ಬಂದಾಳು. ಆ ಸಮಯದಲ್ಲಿ ಅವಳನ್ನು ಕಂಡು ಹೊಟ್ಟೆ ತುಂಬಾ ಮಾತನಾಡುವೆನು ' ಎಂಬಿದೊಂದು ಇಚ್ಛೆಯನ್ನು ಮಾತ್ರ ಇವಳು ಇಟ್ಟುಕೊಂಡಿದ್ದಳು! ಆದರೆ ದಿನಗಳಾದುವು, ವರ್ಷಗಳಾದುವು' ಆದರೂ ಚಂಪೆಯು ಬರಲಿಲ್ಲ! ಅವಳನ್ನು ಕರತರಬೇಕೆಂದು ಜಯವಂತರಾಯನು ಹಲವು ಬಾರಿ ಆಲೋಚನೆ ಮಾಡಿದ್ದನು. ಆದರೆ ಅವನ ಹೆಂಡತಿಯು 'ಹಳ್ಳಿಗಳಲ್ಲೆಲ್ಲಾ ಜ್ವರವಿದೆ! ಮಂಗಳೂರಲ್ಲಿ ಪ್ಲೇಗು ಇದೆ! ಉಡುಪಿಯಲ್ಲಿ ಸಿಡುಬು ಇದೆ! ದೂರದ ಪ್ರಯಾಣದಿಂದ ಅವಳಿಗೆ ಶ್ರಮವಾದೀತು!' ಎಂಬ ಇನೇ ಮೊದಲಾದ ನೆಪಗಳನ್ನು ಹೇಳಿದುದರಿಂದ ಅವನು ಸುಮ್ಮನಿದ್ದನು. ಆದರೆ ವರ್ಷಕ್ಕೊಂದು ಸಲ ಅವಳನ್ನು ನೋಡಿ ಮಾತನಾಡಿ ಬಾರದಿದ್ದರೆ ಜಯವಂತರಾಯನಿಗೆ ಸಮಾಧಾನವಾಗುತ್ತಿರಲಿಲ್ಲ.

ಚಂಪಕೆಯ ಸಹವಾಸವು ಕಳೆದುಹೋದುದರಿಂದ ಮಲ್ಲಿಕೆಗೆ ಪ್ರಾರಂಭದಲ್ಲಿ ಬಹಳ ದುಃಖವಾಗುತ್ತಿತ್ತು.

ಕ್ರಮೇಣ ಹೊತ್ತು ಹೋಗುವುದಕ್ಕಾಗಿ ಗಿರಿಜಾಬಾಯಿ ಯು ಅವಳಿಗೆ ಶಾಸ್ತ್ರೋಕ್ತವಾದ ಗಾಯನ,ನರ್ತನವನ್ನು ಕಲಿಸುತ್ತಿದ್ದಳು ಹೀಗಾಗಿ ಮಲ್ಲಿಕೆಗೆ ಚಂಪೆಯ ವಿರಹ ವ್ಯಥೆಯು ಕ್ರಮೇಣ ಕಡಿಮೆಯಾಗುತ್ತಾ ಬಂತು. ಮಲ್ಲಿಕೆಯು ಗಿರಿಜಾಬಾಯಿಗೆ ಬಹಳ ಮಯಸ್ಸಾದ ಮೇಲೆ ಹುಟ್ಟಿದ ಒಬ್ಬಳೇ ಮಗಳು. ಆದ ಕಾರಣ ಅವಳನ್ನು ಮುದ್ದಿನಿಂದ ನೋಡುತ್ತಿದ್ದಳು. ಸ್ವಭಾವ ದಲ್ಲಿ ಮಲ್ಲಿಕೆಯು ಗುಣವಂತಳೂ ಚುರುಕು ಬುದ್ಧಿಯು ವಳೂ ಇದ್ದಳು. ನೋಡಲಿಕ್ಕೆ ಬಹಳ ಸುಂದರಿ. ಈ ಕಾರಣದಿಂದ ಅವಳನ್ನು ಮುಂದಕ್ಕೆ ತನ್ನ ವೃತ್ತಿ ಗೇ ತಾನು ಸೇರಿಸಿ ಲಕ್ಷಾಧೀಶಳಾಗಬೇಕೆಂಬ ಮಹತ್ವಾ ಕಾಂಕ್ಷೆಯಿಂದ ಗಿರಿಜಾಬಾಯಿಯು ಮಗಳನ್ನು ಬಹಳ ಪ್ರೀತಿಯಿಂದ ಸಾಕುತ್ತಿದ್ದಳು. ತಾರುಣ್ಯದಲ್ಲಿ ಹಳ್ಳಿ ಯ ಒಳ್ಳೇ ಧನಿಕ ಜಮೀನುದಾರನ ಆಶ್ರಯವು ಗಿರಿಜಾ ಬಾಯಿಗೆ ದೊರಕಿತ್ತು. ಆಗ ಅವಳು ಸಂಗ್ರಹಿಸಿಟ್ಟದ್ದ ಹಣದ ಚೀಲಗಳನ್ನು ಈಗ ತನ್ನ ಮಗಳಿಗೋಸ್ಕರ ಒಂದೊಂದಾಗಿ ಬಿಚ್ಚಲಾರಂಭಿಸಿದಳು. ತರತರದ ಸೀರೆ ಗಳು, ವಜ್ರ ಮತ್ತು ಚಿನ್ನದ ಆಭರಣಗಳು, ಒಳ್ಳೇ ತಿಂಡಿ ಗಳು ಮೊದಲಾದುವುಗಳ ಅಭಿಲಾಷೆಯನ್ನು ಅವ ಳಿಗೆ ಕಲಿಸುವುದರಲ್ಲಿ ಉದ್ಯುಕ್ತಳಾದಳು. ಚಿಕ್ಕ ಪ್ರಾಯದ ಬಾಲಿಕೆಯರ ಮನಸ್ಸು ಹರಿಯುವ

ನೀರಿನಂತಿರುತ್ತದೆ. ನಾವು ಅವುಗಳಿಗೆ ಯಾವ ದಾರಿಯನ್ನು ತೋರಿಸುತ್ತೇವೋ ಅದನ್ನೇ ಅವು ಅನುಸರಿಸುತ್ತವೆ. ಆದರೂ ಧೃಢ ಮನಸ್ಸಿನ ಮಲ್ಲಿಕಯ ಮೇಲೆ ಈ ಸುಖಭೋಗಗಳಿಂದ ವಿಶೇಷವೇನೂ ಪರಿಣಾಮವಾಗಲಿಲ್ಲ. ಗಾಯನಕಲೆಯನ್ನು ಶಾಸ್ತ್ರೋಕ್ತವಾಗಿ ಬೇರೆಬೇರೆ ಪ್ರಖ್ಯಾತ ಗಾಯಕರಿಂದ ಕಲಿಯುತ್ತಿದ್ದಳು. ಸಂಗೀತವೆಂದರೆ ಮಲ್ಲಿಕೆಯ ಪ್ರೀತಿಯ ಕಲೆಯಾಗಿತ್ತು. ಸ್ವಭಾವದಿಂದಲೇ ಅವಳಿಗೆ ಅದರಲ್ಲಿ ಅಭಿರುಚಿಯಿದ್ದುದರಿಂದ ತ್ವರ್ಯದಲ್ಲಿಯೇ ಅವಳು ಸಂಗೀತದಲ್ಲಿ ವಿದ್ವಾಂಸಳಾಗಿಬಿಟ್ಟಳು. ಅದನ್ನು ಅವಳು ಲೋಕೋಪಯೋಗಕ್ಕೆ ಹಾಕಿ ಧನಸಂಗ್ರಹಿಸಬೇಕೆಂದು ಗಿರಿಜಾಬಾಯಿಯ ಪ್ರಬಲ ಇಚ್ಛೆಯಾಗಿತ್ತು. ಆದರೆ ಮಲ್ಲಿಕಯು ಇದಕ್ಕೆ ಸಮ್ಮತಿಸಲಿಲ್ಲ.

ಹೀಗೆ ಮೂರು ನಾಲ್ಕು ವರ್ಷಗಳು ಕಳೆದುವು. ಹಳ್ಳಿಯ ಶುದ್ಧ ಗಾಳಿ, ಸರಳ ಊಟ, ಇವುಗಳಿಂದ ಮಲ್ಲಿಕೆಯು ದಿನ ಹೋಗುತ್ತಾ ಶುಕ್ಲಪಕ್ಷದ ಚಂದ್ರನಂತೆ ಬೆಳೆದಳು. ನೋಡಲಿಕ್ಕೆ ಸುಂದರಿಯಾಗಿಯೂ, ಗಾಯನ ನರ್ತನಗಳಲ್ಲಿ ಪ್ರವೀಣಳಾಗಿಯೂ, ಇದ್ದುದರಿಂದ ಇವಳ ಖ್ಯಾತಿಯು ಬೇಗ ಸುತ್ತುಮುತ್ತಲಿನ ಊರುಗಳಲ್ಲಿ ಪಸರಿಸಿತು. ಇದರಿಂದ ಇವಳ ಜಾತಿಯ ಅನೇಕ ವಾರಾಂಗನೆಯರಿಗೆ ದುಃಖವೂ ಮತ್ಸ

ರವೂ ಉಂಟಾಯಿತು. ಶ್ರೀಮಂತರ ಕಡೆಯಿಂದ ದಲ್ಲಾಳಿಗಳೂ ಅವಳಿರುವಲ್ಲಿಗೆ ಬರತೊಡಗಿದರು ಆದರೆ ಮಲ್ಲಿಕೆಯು ಅವರನ್ನೆಲ್ಲ ಬಹಳವಾಗಿ ತುಚ್ಛೀಕರಿಸಿ ಕಳುಹಿಸುವಳು! ಇಲ್ಲವೆ ಊರವರು ಗಾಯನ ನರ್ತನಕ್ಕಾಗಿ ಅವಳನ್ನು ಆಮಂತ್ರಿಸುವರು ಈ ಆಮಂತ್ರಣಗಳನ್ನೂ ಅವಳು ಒಂದಲ್ಲ ಒಂದು ವಿಧದಿಂದ ತಪ್ಪಿಸಿಕೊಳ್ಳುವಳು

ತನ್ನ ಪುತ್ರಿಯ ಸೌಂದರ್ಯ, ಬುದ್ಧಿವಂತಿಕೆಗಳು ಕಾಡಿನ ಗುಲಾಬಿ ಗಿಡದಂತೆ ಬೆಲೆಯಿಲ್ಲದೆ ಹೋಗುತ್ತವೆಂದು ಗಿರಿಜಾಬಾಯಿಯು ಕೊರಗಿದಳು ಹಳ್ಳಿಯಾದುದರಿಂದ ವಿಶೇಷ ಧನಸಂಗ್ರಹವಾಗಲಿಕ್ಕಿಲ್ಲ. ಆದುದರಿಂದ ಮಂಗಳೂರು, ಬೆಂಗಳೂರಂತಹ ದೊಡ್ಡ ಶಹರುಗಳಿಗೆ ಹೋದರೆ ಒಳ್ಳೆಯದಿತ್ತು ಎಂದು ಅನೇಕ ಸಲ ಇವಳಿಗೆ ತೋರುತ್ತಿತ್ತು. ಆದ ಕಾರಣ ಅವಳು ಬೆಂಗಳೂರಿನಲ್ಲಿದ್ದ ತನ್ನ ತಮ್ಮನೊಬ್ಬನಿಗೆ ಪತ್ರ ಬರೆದಳು. ಅವನು ಶೀಘ್ರದಲ್ಲಿಯೇ ಮುಕ್ತಪುರಕ್ಕೆ ಬರುವೆನೆಂದು ತಿಳಿಸಿದನು. ತನ್ನ ಮಗಳು ಯಾವನಾದರೊಬ್ಬ ಒಳ್ಳೇ ಲಕ್ಷ್ಮೀಪುತ್ರನ ಕೈಯಲ್ಲಿ ಸಿಕ್ಕದೆ ತಾನು ಸಾಯುವುದಿಲ್ಲವೆಂದು ಅವಳು ನಿಶ್ಚಯ ಮಾಡಿಕೊಂಡಿದ್ದಳು! ಅವಳ ತಮ್ಮ ತಾರಾನಾಥನೂ ಬಂದೇ ಬಿಟ್ಟನು! ಅವನು ಮಲ್ಲಿಕೆಯನ್ನು ನೋಡದೆ ಬಹಳ ವರ್ಷಗಳಾಗಿದ್ದುವು.

ಯೌವನದ ಭರದಲ್ಲಿದ್ದ ಸುಂದರಿಯಾದ ಮಲ್ಲಿಕೆಯನ್ನು ನೋಡಿದ ಕೂಡಲೇ "ಒಂದಾವರ್ತಿ ಬೆಂಗಳೂರಿಗೆ ಹೋಗುವುದೇ ತಡ! ಬೇಕಾದಷ್ಟು ಐಶ್ವರ್ಯ ಸುಖ ವನ್ನು ಅನುಭವಿಸಬಹುದು. ಮಲ್ಲಿಕೆಯನ್ನು ನೋಡಿ ಕುರುಡನು ಕೂಡ ಹುಚ್ಚನಾದಾನು! ಸಾಲದುದಕ್ಕೆ ಸಂಗೀತ ನರ್ತನಗಳಲ್ಲಿಯೂ ಪ್ರವೀಣಳು!" ಎಂದು ತನ್ನ ಅಕ್ಕನಿಗೆ ಭರವಸೆಕೊಟ್ಟನು

೬

ತಾರಾನಾಥನು ಚಂಡಿಸ್ವಭಾವದವನು ಕೈ ಹಿಡಿದ ಕಾರ್ಯವು ಕೊನೆಗಾಣಿಸದೆ ಅವನಿಗೆ ನಿದ್ರೆಯೇ ಬರು ತಿದ್ದಿಲ್ಲ. ಗಿರಿಜಾಬಾಯಿಯಂತೂ ಇಂತಹ ಉತ್ಸವದ ದಿನಗಳನ್ನು ಯಾವಾಗ ನೋಡುವೆನೆಂದು ಉತ್ಸುಕಳಾ ಗಿದ್ದಳು. ಇನ್ನೇನು? ಮೂರು ನಾಲ್ಕು ದಿನಗಳಲ್ಲಿಯೇ ಮುಕ್ತಿಪುರಕ್ಕೆ ಸಲಾಮುಕೊಟ್ಟು ಬೆಂಗಳೂರಿಗೆ ಹೋ ಗುವ ಸಿದ್ಧತೆಗೆ ಪ್ರಾರಂಭವಾಯಿತು. ಹೋಗುವ ಮುಂಚಿನ ದಿನವೇ ನಾರಾಯಣ ಪುರೋಹಿತರಿಂದ ಶ್ರೀ ಸತ್ಯನಾರಾಯಣ ವ್ರತವನ್ನು ಮಾಡಿಸಲಿಕ್ಕೆ ಅವಳು ಮರೆಯಲಿಲ್ಲ! ಅದೂ ಅಲ್ಲದೆ ಶ್ರೀ ಮಹಾಲಿಂಗೇಶ್ವರ ನಿಗೆ ಸ್ವಾಷ್ಟಾಂಗ ಪ್ರಣಾಮವನ್ನು ಮಾಡಿ, "ನನ್ನ ಮಗಳ ಬಲೆಯಲ್ಲಿ ಒಳ್ಳೆ ಐಶ್ವರ್ಯವಂತನೊಬ್ಬನು ಸಿಕ್ಕಿದರೆ

ನಿನಗೊಂದು ಚಿನ್ನದ ಕಿರೀಟವನ್ನು ಮಾಡಿಕೊಡು ತ್ತೇನೆ" ಎಂದು ಹರಕೆ ಹೇಳಿಕೊಂಡಳು.

ಬೆಂಗಳೂರಿಗೆ ಬಂದ ಮೇಲೆ ಪ್ರಥಮದ ಕೆಲವು ದಿನಗಳನ್ನು ಮಲ್ಲಿಕೆಯು ಸಂತೋಷದಿಂದ ಕಳೆದಳು. ದಿನನಿತ್ಯವೂ ತಾರಾನಾಥನು ನಾಟಕ ಸಿನೇಮಾ ಅಲ್ಲದೆ ಇನ್ನೂ ಪ್ರೇಕ್ಷಣೀಯವಾದ ಸ್ಥಳಗಳಿಗೆ ಅವಳನ್ನು ಕರ ಕೊಂಡು ಹೋಗುತ್ತಿದ್ದನು ಕ್ರಮೇಣ ಅವಳ ತಾಯಿ ಯೂ ಮಾವನೂ ಜಾತಿಯ ವ್ಯವಹಾರದ ಕುರಿತು ಅವ ಳಿಗೆ ಭಾಷಣಗಳನ್ನು ಕೊಡಲಾರಂಭಿಸಿದರು! ಅದು ಮಾತ್ರ ಅವಳಿಗೆ ಸರಿ ಬೀಳಲಿಲ್ಲ. ಅವಳು ಮನಸ್ಸಿನಲ್ಲಿ ಬಹಳವಾಗಿ ಕೊರಗಲಿಕ್ಕೆ ಪ್ರಾರಂಭಿಸಿದಳು.

ಪಾಪ, ಪುಣ್ಯ, ನೀತಿ, ಧರ್ಮ ಇವುಗಳ ಶಿಕ್ಷಣವು ಅವಳಿಗೆ ಇನ್ನೂ ಯಾರ ಕಡೆಯಿಂದಲೂ ದೊರೆತಿರಲಿಲ್ಲ. ಆದರೂ ಅವಳ ವಿಚಾರಶಕ್ತಿಯು ಅಮೋಘವಿದ್ದುದ ರಿಂದ ಅವಳು ಜ್ಞಾನಾಜ್ಞಾನದ ಕಡೆಗೆ ಲಕ್ಷ್ಯವಿಟ್ಟು ನೀಚ ವೃತ್ತಿಗೆ ಪ್ರವೃತ್ತಳಾಗದೆ ತನ್ನ ಹೇತುವನ್ನು ಕೊನೆ ಗಾಣಿಸಲು ಹವಣಿಸುತ್ತಿದ್ದಳು. ಅವಳಿಗೆ ತನ್ನ ಭಾವೀ ಜೀವನವು ಯಾವರೀತಿಯಲ್ಲಿ ಕೊನೆಗಾಣುವುದೆಂದು ಹೇಳಲು ಸಾಧ್ಯವಿರಲಿಲ್ಲ. ಅವಳು ತನ್ನ ಬಾಲ್ಯಾವಸ್ಥೆ ಯನ್ನು ಕುರಿತು ವಿಚಾರಮಾಡುವಳು. ಆ ಸಮಯ ದಲ್ಲಿ ಅವಳಿಗೆ ತನ್ನ ಗೆಳತಿಯಾದ ಚಂಪೆಯ ನೆನಪಾಗು

ವುದು. ಅವಳ ವಿವಾಹ, ವಿರಹ ಇವೆಲ್ಲಾ ಅವಳ ಕಣ್ಣಿನ ಮುಂದೆ ಸ್ಪಷ್ಟವಾಗಿ ತೋರುವುವು. ಮರುಕ್ಷಣದಲ್ಲಿಯೇ ಜಂಪೆಯ ಚಿಕ್ಕಮ್ಮನು "ನಿನ್ನ ವೃತ್ತಿಯನ್ನೇ ಅವಳಿಗೆ ಕಲಿಸಿ ಮನೆಯಲ್ಲಿಟ್ಟುಕೊಳ್ಳಬೇಕೆಂದು ಹೇಳುವಿಯಾ?" ಎಂದು ಘನಗರ್ಜನೆಯಿಂದ ಆಡಿದ ಕಠೋರ ಮಾತುಗಳು ಅವಳ ಸ್ಮರಣ ಶಕ್ತಿಯಲ್ಲಿ ಬರುವುವು. ಇದರಿಂದ ಅವಳು ತನ್ನ ವೃತ್ತಿಯು ಇನ್ನೂ ತುಚ್ಛಾಸ್ಪದವಾದುದೆಂದು ಖಂಡಿತಮಾಡಿಕೊಳ್ಳುವಳು. ಮತ್ತು ತಾನು ಎಂದಿಗೂ ಅಂತಹ ವೃತ್ತಿಯಲ್ಲಿ ಕಾಲಿಡಲಿಕ್ಕಿಲ್ಲವೆಂದು ಧೃಡವಾದ ನಿಶ್ಚಯಮಾಡುವಳು.

ಇದೇ ರೀತಿ, ದೂಷಿತವಾದ ಮನೆತನದಲ್ಲಿ ಬೆಳೆದವಳಾದರೂ ಮನಸ್ಸಿನಲ್ಲಿ ನಿರ್ಮಲಳಾಗಿಯೂ, ನಿಷ್ಪಾಪಳಾಗಿಯೂ ಇದ್ದ ಮಲ್ಲಿಕೆಗೆ ಗಿರಿಜೆಯ ಮತ್ತು ತಾರಾನಾಥನ ಭಾಷಣಗಳು ರುಚಿಸದೇ ಹೋದುವು. ಇದು ಸಹಜವೇ ಸರಿ. ಆದರೆ ಅವಳ ವಿಚಾರ ಶಕ್ತಿಯು ಸನ್ಮಾರ್ಗದಲ್ಲಿದ್ದರೂ, ಅವಳ ಮನಸ್ಸು ಇನ್ನೂ ಧೃಡವಾಗಿರಲಿಲ್ಲ. ಆದರೆ ಅವಳು ಬೆಂಗಳೂರಿಗೆ ಬಂದ ಕೆಲವು ದಿನಗಳಲ್ಲಿಯೇ ಈ ವಿಷಯದಲ್ಲಿಯೂ ಅನುಭವ ಪಡೆದಳು. ಒಂದು ದಿನ ಅವಳ ಮನೆಯ ಬಾಗಿಲನಲ್ಲೇ ಒಬ್ಬ ಪುಸ್ತಕ ವ್ಯಾಪಾರಿಯು "ಐವತ್ತು ರೂಪಾಯಿಗಳ ಪುಸ್ತಕಗಳನ್ನು ಐದೇ ರೂಪಾಯಿಗೆ ಕೊಡುತ್ತೇನೆ"

ಎಂದು ಆರ್ಭಟಿಸುತ್ತಾ ಹೋಗುತ್ತಿದ್ದನು. ಇವಳಿಗೆ ಓದುಬರಹವು ಬರುತ್ತಿತ್ತು. ಅದರಲ್ಲೂ ಓದುವುದೆಂದರೆ ಅದೊಂದು ಅವಳ ಪ್ರಿಯವಾದ ವ್ಯವಸಾಯವಾಗಿತ್ತು. ಅವನನ್ನು ಕೂಗಿ ಮೇಲೆ ಬರಲು ಹೇಳಿದಳು. ಗಿರಿಜಾಬಾಯಿಗೆ ಮಾತ್ರ ಬರೇ ಪುಸ್ತಕಗಳಿಗೋಸ್ಕರ ಇಷ್ಟು ಹಣವನ್ನು ಖರ್ಚುಮಾಡಲು ಮನಸ್ಸಿರಲಿಲ್ಲ. ಆದರೆ ಪುಸ್ತಕ ವ್ಯಾಪಾರಿಯು ಮಾಡಿದ ವರ್ಣನೆಯಿಂದಲೂ, ಮಲ್ಲಿಕಯ ವತ್ತಾಯದಿಂದಲೂ, ಕೆಲವನ್ನು ತೆಗೆದುಕೊಂಡಳು.

ಸಾಧಾರಣ ಮೂವ್ವತ್ತಾರು ಪುಸ್ತಕಗಳಿದ್ದುವು. ಕೆಲವು ನಾಟಕಗಳೂ, ಕಾದಂಬರಿಗಳೂ ಇನ್ನೂ ಅನೇಕ ಸ್ತ್ರೀಪುರುಷರ ಉಪದೇಶಪರವಾದ ಚರಿತ್ರಗಳೂ ಇದ್ದುವು. ಇದರಿಂದ ಮಲ್ಲಿಕೆಗೆ ಅತ್ಯಾನಂದವಾಯಿತು. ಅವಳು ರಾತ್ರಿ ಹಗಲೆನ್ನದೆ ಅವುಗಳನ್ನೋದುವುದರಲ್ಲಿಯೇ ಮಗ್ನಳಾದಳು. "ಲೋಕದಲ್ಲಿ ಎಂತಹ ಸದ್ಗುಣಯುಕ್ತರಾದ ಸ್ತ್ರೀರತ್ನಗಳು ಇದ್ದಾವೆ!" ಎಂದು ತನ್ನೊಳಗೆ ಆಲೋಚಿಸುತ್ತಾ ಇರುವಳು. ನಿದ್ರಾವಸ್ಥೆಯಲ್ಲಿಯೂ ಚರಿತ್ರಯಲ್ಲಿನ ಸ್ತ್ರೀಪುರುಷರ ಮನೋನಿಗ್ರಹ, ಶಾಂತತೆ, ಔದಾರ್ಯ, ಸದ್ವರ್ತನೆ ಇವುಗಳ ವಿಷಯ ಅವಳು ಆಲೋಚಿಸಿದ ಸ್ವಪ್ನಗಳೇ ಬೀಳುತ್ತಿದ್ದುವು. ಮುಖ್ಯವಾಗಿ ಪುಸ್ತಕಗಳಲ್ಲಿನ ಕಾಲ್ಪನಿಕ ಅಥವಾ ನಿಜ

ವಾದ ಆದರ್ಶರಾದ ವಿವಾಹಿತ ಸ್ತ್ರೀಪುರುಷರ ಸಂಸಾರಿಕ ಕಷ್ಟಗಳು, ಅದರಿಂದವರು ಪವಿತ್ರರಾಗಿ ಪಾರಾಗುವ ರೀತಿ ಮೊದಲಾದುವುಗಳಿಂದ ಅವಳ ಮನಸ್ಸಿನಲ್ಲಿ ಉತ್ಕೃಷ್ಟ ಪರಿಣಾಮವಾಯಿತು ಅವಳು ಮುಂದೆ ತನ್ನ ಆಯುಷ್ಯದಭವಿತ್ವವನ್ನು ಸ್ಪಷ್ಟವಾಗಿ ಕಂಡು ಹಿಡಿದಳು. ಆದಕಾರಣ ತಾಯಿಯೂ, ಮಾವನೂ ಹೇಳಿದ ಯಾವ ನೀಚಕೃತ್ಯವನ್ನೂ ಅವಳು ಮಾಡಲಾರದೆ ಹೋದಳು. ಅಲ್ಲದೆ, ಅವರ ಕೂಡೆ ಈ ವಿಷಯದಲ್ಲಿ ತನಗಿದ್ದ ತಿರಸ್ಕಾರವನ್ನು ಸೂಚಿಸಿ ಜಗಳಾಡಲು ಕೂಡ ಅವಳು ಹಿಂಜರಿಯಲಿಲ್ಲ. ಆದರೂ ಗಿರಿಜೆಯು ನಿರಾಶಳಾಗಲಿಲ್ಲ. ಮಲ್ಲಿಕೆಯನ್ನು ಇನ್ನೂ ಆ ಪಥಕ್ಕೆ ತಿರುಗಿಸುವುದಕ್ಕೋಸ್ಕರ ತನ್ನ ತಮ್ಮನ ಸಹಾಯದಿಂದ ಭಗೀರಥ ಪ್ರಯತ್ನಗಳನ್ನು ಮಾಡುತ್ತಿದ್ದಳು.

೭

ಪ್ರಾತಃಕಾಲ ಹತ್ತು ಘಂಟೆ ಸಮಯ. ಒಂದೆರಡು ತಾಸುಗಳ ಮೊದಲು ಹೊರಗೆ ಹೋಗಿದ್ದ ತಾರಾನಾಥನು ಶೀಘ್ರವಾಗಿ ಮನೆಗೆ ಬಂದನು. ಕೋಣೆಯೊಳಗೆ ಉಲ್ಲಾಸದಿಂದ ಅವನ ಪ್ರೀತಿಯ ರಾಜಪ್ಪನ "ಇವಳ್ಯಾರೀ ಸುಕುಮಾರೀ ಸುಮನೋಹರಿ" ಎಂಬ ಹಾಡನ್ನು ಹಾಡಲಾರಂಭಿಸಿದನು. ಅವನು ಎಂದಿನಂತೆ ನಿಧಾನವಾಗಿ ಹೇಳದೆ ಉತ್ಸುಕತೆಯಿಂದ ಹಾಡುವುದನ್ನು

ಕೇಳಿ ಈ ಹೊತ್ತು ಏನೋ ವಿಶೇಷವಿರಬೇಕೆಂದು ಗಿರಿಜೆಯು ಊಹಿಸಿದಳು. ಅದನ್ನು ತಿಳಿಯುವುದ ಕ್ಕೋಸ್ಕರ ಅವನಿದ್ದಲ್ಲಿ ಬಂದಳು. ತಾರಾನಾಥನು ಅವಳ ಬರುವಿಕೆಯನ್ನೇ ನಿರೀಕ್ಷಿಸುತ್ತಿದ್ದನು! ಅವಳನ್ನು ನೋಡಿದ ಕೂಡಲೇ "ನಿಮ್ಮ ಬಲೆಯಿಂದ ಹೇಗಾದರೂ ಹೊರಗೆ ಬಿದ್ದೆ. ಅಮ್ಮಮ್ಮಾ! ಈ ಹೊತ್ತು ಚಿನ್ನದಂಥ ದಾರಿ ಸಿಕ್ಕಿತು. ಅದು ನಡೆಯುವುದು ನಿಮ್ಮ ಅದೃಷ್ಟ ವನ್ನು ಹೊಂದಿರುತ್ತದೆ!" ಎಂದನು.

"ಅಂದರೆ ಇಂತಹ ಸಾಹಸವನ್ನಾದರೂ ಏನು ಮಾಡಿದೆ, ಹೇಳಲಾರೆಯಾ?" ಎಂದಳು.

"ಅಕ್ಕಾ! ನಿತ್ಯದಂತೆ ಈ ದಿನವೂ ಅವರ ಬಂಗ ಲೆಯ ಸಮೀಪ ತಿರುಗುತ್ತಾ ಇದ್ದೆ. ಹೇಗೂ ಬಹಳ ಹೊತ್ತಿನ ಮೇಲೆ ಸವಾರಿಯು ಮೋಟಾರಿನಲ್ಲಿ ತಿರು ಗಾಡಿಕೊಂಡು ಹಿಂತಿರುಗಿತು. ಅವರನ್ನು ನೋಡಿದ ಕೂಡಲೆ ಅವರ ಮನೆಯೊಳಗೆ ಹೋಗುವವನಂತೆಯೇ ನಟಿಸಿದೆ. ಅವರು ಮೋಟಾರಿನಿಂದಿಳಿದು 'ಸಾಯಂ ಕಾಲ ಮಲ್ಲೇಶ್ವರದ ರಾಮಮಂದಿರದಲ್ಲಿ ಹರಿಕೀರ್ತನೆ ಯಿದೆ. ಮೋಟಾರು ಜಲ್ದಿ ತೆಗೆದುಕೊಂಡು ಬಾ' ಎಂದು ಡ್ರ್ಯೈವರನೊಡನೆ ಹೇಳಿದರು. ಅವರು ಮನೆ ಯೊಳಗೆ ಹೋಗುತ್ತಿರುವಾಗಲೇ ದೊಡ್ಡದೊಂದು ನಮಸ್ಕಾರ ಮಾಡಿದೆ. ಅವರು ಅಲ್ಲಿಯೇ ನಿಂತು

ಬಿಟ್ಟು 'ಯಾರು, ಏನು ಕೆಲಸವಿದೆ?' ಎಂದು ಕೇಳಿದರು. ನಾನು ಕೂಡಲೆ ಅವರ ತಂದೆಯನ್ನು ಕಾಣುವುದಕ್ಕಾಗಿ ಬಂದಿರುವವನೆಂದು ಹೇಳಿದೆ. ಅವರು ಚಿಂತಾವಶರಾಗಿ 'ನನ್ನ ತಂದೆಯು ಆರು ತಿಂಗಳುಗಳ ಹಿಂದೆಯೇ ಸ್ವರ್ಗಸ್ಥರಾದರು' ಎಂದರು. ನಾನು ಇದನ್ನು ಕೇಳಿ ಬಹಳ ದುಃಖಿತನಾದಂತೆ ನಟಿಸಿದ್ದು ಎಣಿಸಿದರೆ ನನಗೀಗಲೂ ನಗೆಯು ಬರುವುದು! ಅವರು ಕೂಡಲೇ 'ಒಳಗೆ ಬನ್ನಿ. ನೀವು ನನ್ನ ತಂದೆಯು ಹಳೆಯ ಸ್ನೇಹಿತರಿರಬಹುದು, ಅಲ್ಲವೆ?' ಎಂದರು. ನಾನು ಒಳ ಹೋಗಿ ಅವರ ದಿವಾನಖಾನೆಯಲ್ಲಿ ಕುಳಿತುಕೊಂಡೆ. ಮಾತ್ರವಲ್ಲ, ನನ್ನ ಮತ್ತು ಅವರ ತಂದೆಯು ಸ್ನೇಹದ ವಿಷಯವಾಗಿ ದೊಡ್ಡದೊಂದು ಕಲ್ಪಿತ ಭಾಷಣವನ್ನು ಕೊಟ್ಟೆ. ಅವರು ಸಂತುಷ್ಟರಾಗಿ ಕಾಫಿಫಲಾಹಾರಾದಿಗಳನ್ನು ಕೊಟ್ಟರು. ಹೊಟ್ಟೆತುಂಬಿಸಿಕೊಂಡು ಬಂದುದಾಯಿತು . . . . . "

"ಒಹೊ! ಇಷ್ಟೇ ಏನು? ಅದರಿಂದ ನಮಗಾದರೂ ಸಿಕ್ಕಿದ ಪ್ರಯೋಜನವೇನು?" ಎಂದು ಗಿರಿಜೆಯು ಅಧೀರಳಾಗಿ ಕೇಳಿದಳು

"ಸಾಯಂಕಾಲ ಮಲ್ಲಿಕೆಯನ್ನು ಕರಕೊಂಡು ರಾಮಮಂದಿರಕ್ಕೆ ಹರಿಕೀರ್ತನೆಗೆ ಹೋಗುವುದೇ ಮತ್ತೇನು?" ಎಂದನು.

"ಅದರಿಂದೇನು ಪ್ರಯೋಜನ?"

"ಪ್ರಯೋಜನವೇನೆಂದರೆ, ಅಪರಿಚಿತಳಿದ್ದುದರಿಂದ ಮಲ್ಲಿಕೆಯ ಸೌಂದರ್ಯದಲ್ಲಿ ಯಾವತರದ ಮೋಹಿನಿಯುಂಟೆಂದು ಅವರಿಗೆ ಗೊತ್ತಿಲ್ಲ. ಒಂದೇ ಒಂದು ಸಲ ಅವರು ಅವಳನ್ನು ನೋಡಿದರೆ ಸಾಕು; ಮತ್ತೇನು, ತಾವಾಗಿಯೇ ಬರುವರು!" ಎಂದನು

ಇದನ್ನು ಕೇಳಿ ಗಿರಿಜೆಗೆ ಸ್ವರ್ಗವೇ ಸಿಕ್ಕಿದಂತಾಯಿತು. ಸ್ವಲ್ಪ ಹೊತ್ತು ವಿಚಾರಮಾಡಿ "ನಿಜವಾಗಿಯೂ ಅವರು ಅಷ್ಟು ಶ್ರೀಮಂತರೇ?" ಎಂದು ಕೇಳಿದಳು ತಾರಾನಾಥನು "ಇದೇನು ಕೇಳುತ್ತಿ? ಇಂದಿಗೆ ಒಂದು ತಿಂಗಳಿಂದ ಅವರ ವಿಷಯವಾಗಿ ಹೆಚ್ಚೆಚ್ಚಿನ ಮಾಹಿತಿಯನ್ನು ತಿಳಿದುಕೊಳ್ಳುವುದರಲ್ಲಿಯೇ ಇದ್ದೆ. ಅವರ ತಂದೆಯಾದರೂ ಶ್ರೀಮಂತರಲ್ಲಿ ಮೊದಲನೆಯವರಾಗಿದ್ದರು. ಈಗ ಸಾಧಾರಣ ಎಂದರೆ ಏಳೆಂಟು ಲಕ್ಷ ರೂಪಾಯಿ ಅವರೊಡನೆ ಇದೆ ಅದಲ್ಲದೆ ಹುಬ್ಬಳಿ, ಬೆಳಗಾಂವ, ಮೈಸೂರು ಎಲ್ಲಿ ನೋಡಿದರೂ ಅವರ ಭಂಡಸಾಲೆಗಳಿವೆ. ಇನ್ನು ಸ್ವಲ್ಪ ಕಾಲ ತೊಂದರೆ ಇದೆ. ಕಾರಣ, ಅವರ ಚಿಕ್ಕಪ್ಪನು ಕಡು ಲೋಭಿ. ಮನೆಯ ಮತ್ತು ಆಸ್ತಿಯ ವ್ಯವಹಾರವನ್ನು ಅವನೇ ನೋಡುತ್ತಿದ್ದಾನೆ ಆದರೇನು? ಮುದುಕನು ಹೆಚ್ಚುಕಾಲ ಬದುಕುವಂತಿಲ್ಲ. ಅವನು ತನ್ನ ಕಣ್ಣು

ಗಳನ್ನು ಮುಚ್ಚಿದನೆಂದರೆ, ಆ ಮೇಲೆ ನಾವಿದ್ದೇವಲ್ಲವೆ? ನೋಡೋಣ. ಇದೊಂದು ಮಾತ್ರ ಲಕ್ಷ್ಯದಲ್ಲಿರಲಿ. ಮಲ್ಲಿಕೆಗೆ ಈ ವಿಚಾರದೊಳಗಣ ಚಕಾರ ಶಬ್ದವನ್ನಾದರೂ ತಿಳಿಯುಗೊಡಬಾರದು. ಅನರ್ಥವಾದೀತು. 'ಹರಿಕೀರ್ತನೆಗೆ ಹೋಗುವಾ' ಎಂದು ಮಾತ್ರ ಹೇಳು" ಎಂದು ಬಹಳ ಚಾತುರ್ಯದಿಂದ ಹೇಳಿದನು

ಪಕ್ಕದ ಕೋಣೆಯಲ್ಲಿ 'ಶ್ರೀಮತಿ ರಮಾಬಾಯಿ ರಾನಡೆ'ಯವರ ಚರಿತ್ರೆಯನ್ನು ಓದುವುದರಲ್ಲಿ ಮಗ್ನಳಾಗಿದ್ದ ಮಲ್ಲಿಕಗೆ ಇವರ ಸಂಭಾಷಣೆಯು ಗಂಧವೂ ತಿಳಿಯಲಿಲ್ಲ.

೮

ಸಾಯಂಕಾಲ ತನ್ನ ಬುದ್ಧಿ ಚಾತುರ್ಯವನ್ನೆಲ್ಲಾ ಖರ್ಚುಮಾಡಿ ಗಿರಿಜೆಯು ಮಗಳನ್ನು ಶೃಂಗರಿಸಿದಳು. 'ನನ್ನ ವಿಷಯವಾಗಿ ಅವಳು ಇಷ್ಟೊಂದು ಪರಿಶ್ರಮವನ್ನು ಏತಕ್ಕೆ ತೆಗೆದುಕೊಳ್ಳುವಳು?' ಎಂದು ಮಲ್ಲಿಕೆಯು ಯೋಚಿಸಿ, ತಿಳಿಯಲಾರದೆ ಹೋದಳು ಆದರೂ ಹರಿಕೀರ್ತನೆಗೆ ಹೋಗುವ ಸಂತೋಷದಲ್ಲಿ ಅದನ್ನೆಲ್ಲಾ ಮರೆತಳು. ಸಾಧಾರಣ ಐದುಘಂಟೆಗೆ ಸರಿಯಾಗಿ ತಾರಾನಾಥನು ಮಲ್ಲಿಕೆಯೊಂದಿಗೆ ಮಲ್ಲೇಶ್ವರಕ್ಕೆ ಹೊರಟನು. ಹದಿನೈದು ನಿಮಿಷಗಳಲ್ಲಿ ಅವರು ರಾಮಮಂದಿರವನ್ನು ಸೇರಿದರು. ಆ ದಿನದ

ಕೀರ್ತನಕಾರರು, ಬಹಳ ಪ್ರಖ್ಯಾತರೂ, ಲೋಕ ಪ್ರಿಯರೂ ಆಗಿದ್ದರು. ಮೈಸೂರು ಪ್ರಾಂತ್ಯದಲ್ಲಿ ಉದಯವಾಗಿದ್ದ ಕೀರ್ತನಕಾರರ ವರ್ಗದವರಲ್ಲಿ ಇವರು ಪ್ರಥಮ ಸ್ಥಾನವನ್ನು ಹೊಂದಿದ್ದರು. ಕೀರ್ತನೆಗೆ ಸ್ವಲ್ಪ ಅವಕಾಶವಿತ್ತು. ತಾರಾನಾಥನು ಮಲ್ಲಿಕೆಗೋಸ್ಕರ ಬಹಳ ಸೊಗಸಾದ ಸ್ಥಳವನ್ನು ಹುಡುಕಿದನು ನಾಲ್ಕು ಕಡೆಗಳಿಂದಲೂ ಅವಳು ಕಾಣುವಂತೆ ಏರ್ಪಾಡು ಆಯಿತು.

ಸ್ವಲ್ಪ ಹೊತ್ತಿನಲ್ಲಿಯೇ ಕೀರ್ತನೆಗೆ ಪ್ರಾರಂಭವಾಯಿತು. ಕೀರ್ತನಕಾರರು 'ಸ್ಕಂಧ ಪುರಾಣ'ದಲ್ಲಿಯ ಕಥೆಯೊಂದರ ಆಧಾರದ ಮೇಲೆ 'ಮಹಾನಂದಾ' ಆಖ್ಯಾನವನ್ನು ಪ್ರಾರಂಭಿಸಿದರು. ಸಮಾಜ ಸೇವೆಯ ಧ್ಯೇಯವನ್ನು ಮುಂದಿಟ್ಟು, ಅದಕ್ಕೋಸ್ಕರ ಕೀರ್ತನೆ ಸಂಸ್ಥೆಯ ಉಪಯೋಗವನ್ನು ತೆಗೆದುಕೊಳ್ಳುತ್ತ ಪ್ರಾಚೀನ ಇತಿಹಾಸಗಳ ಮತ್ತು ಪುರಾಣಗಳ ಆಧಾರದಿಂದ ಈಗಿನ ರಾಜಕೀಯ ಮತ್ತು ಸಾಮಾಜಿಕ ಪ್ರಶ್ನೆಗಳ ಕುರಿತು ತನಗಿದ್ದ ಅಭಿಪ್ರಾಯಗಳನ್ನು ಬಹಳ ಸೊಗಸಾಗಿ ಕೀರ್ತನೆಯ ಸಮಯದಲ್ಲಿ ಹೇಳಿದರು. ಇದರಿಂದ ತಾರಾನಾಥನು ಮಲ್ಲಿಕೆಯನ್ನು ನೀಚ ಹೇತುವಿನಿಂದ ಕರೆದುತಂದಿದ್ದರೂ ಅವಳು ಕೀರ್ತನೆಯಿಂದ ಬಹಳ ಹಿತವಾದ ಪಾಠವನ್ನೇ ಕಲಿತಂತೆ ಆಯಿತು. ಬಾಲ್ಯದಲ್ಲಿ ಅವಳು ಅನೇಕ ಕೀರ್ತನೆಗಳನ್ನು ಕೇಳಿ

ದ್ದಳು. ಆದರೆ ಅವುಗಳು 'ಬೆಲೆಗೆ ತಕ್ಕಂತೆ ವ್ಹಾಲು' ಎಂಬಂತೆ ಇರುತ್ತಿದ್ದವು. ಎಲ್ಲಿಯಾದರೂ ದೇವರ ಶೃಂಗಾರ ಚೇಷ್ಟೆಯ ವರ್ಣನೆಯನ್ನು ಮಾಡಿ ಶ್ರೋತೃ ವೃಂದಕ್ಕೆ ನಗುವಂತೆ ಮಾಡಿ, ಸಿಷ್ಕರ್ಷೆಮಾಡಿದ ಹಣ ವನ್ನು ಚೀಲದಲ್ಲಿ ಹಾಕಿಕೊಂಡು ಹೋಗುತ್ತಿದ್ದರು. ಆದುದರಿಂದ ಈ ಹೊತ್ತಿನ ವಿಚಾರಪೂರ್ಣವಾದ 'ನಿರೂಪಣ'ವನ್ನು ಕೇಳಿದ ಕೂಡಲೇ ಮಲ್ಲಿಕೆಯು ಹೊರಗಿನ ಪ್ರಪಂಚವನ್ನೇ ಮರೆತಳು. ಕಳೆದ ಒಂದೆ ರಡು ತಿಂಗಳಿಂದ ಅವಳಲ್ಲುಂಟಾದ ಮಾನಸಿಕ ಪರಿ ವರ್ತನೆಗೆ ಇಂತಹ ಮಾರ್ಗದರ್ಶಕವಾದ, ಅಧಿಕಾರ ಯುಕ್ತವಾದ ಭಾಷಣವು ಇನ್ನೂ ಪ್ರಬಲತೆಯನ್ನು ತಂದುಬಿಟ್ಟಿತು. ದಾಹ ಭರಿತವಾದ ಭೂಮಿಯು ಪ್ರಥಮ ಮಳೆಯ ಒಂದೇ ಒಂದು ಬಿಂದುವನ್ನು ಕೂಡ ಬಿಡದೆ ಹೇಗೆ ಹೀರಿಕೊಳ್ಳುತ್ತದೆಯೋ ಅದೇ ರೀತಿಯಲ್ಲಿ ಕೀರ್ತನಕಾರರ ಬಾಯಿಂದ ಹೊರಡುವ ಪ್ರತಿಯೊಂದು ಶಬ್ದವನ್ನೂ ಮಲ್ಲಿಕೆಯು ತನ್ನ ಹೃದಯದಲ್ಲಿ ಅಣಿ ಮಾಡಿಟ್ಟುಕೊಂಡಳು.

ಆದರೆ ಇದೇ ಸಮಯದಲ್ಲಿ ತಾರಾನಾಥನ ಮನಸ್ಸಿನ ಸ್ಥಿತಿಯು ಏನಾಗಿರಬಹುದು? ಅವನು ಕ್ಷಣ ಕ್ಕೊಂದು ಸಲ ಬೀದಿಯನ್ನು ನೋಡುತ್ತಾ ನಿರಾಶನಾಗಿ ತಳಮಳಿಸುತ್ತಿದ್ದನು. ನಿರೀಕ್ಷಣೆ ಮಾಡುತ್ತಿದ್ದ ತರು

ಣನು ಬರಲೇ ಇಲ್ಲ. ತನ್ನ ಮನಸ್ಸಿನಲ್ಲಿದ್ದ ಮುಂದಿನ ಸುಖದ ಸ್ವಪ್ನಗಳೆಲ್ಲ ಮರೆಯಾಗಿ ಹೋಗುತ್ತವೋ ಏನೊ ಎಂದು ಬಹಳ ಚಿಂತಾಕ್ರಾಂತನಾದನು ಮರು ಕ್ಷಣದಲ್ಲಿಯೇ ದೇವಸ್ಥಾನದ ಎದುರುಗಡೆ ಒಂದು ಮೋಟಾರು ಬಂದು ನಿಂತಿತು ಇದನ್ನು ನೋಡಿದ ಕೂಡಲೇ ತಾರಾನಾಥನ ಮುಖವು ಪ್ರಫುಲ್ಲಿತವಾ ಯಿತು. ಮೋಟಾರಿನಿಂದ ಇಳಿದು ಬಂದ ತರುಣನು ಬೆಳಿಗ್ಗೆ ಇವನ ಹತ್ತಿರ ಸಂಭಾಷಣೆ ಮಾಡಿದವನೇ ಆಗಿ ದ್ದನು ಮನೋಹರನು ಒಳಗೆ ಬಂದು ಇಬ್ಬರ ದೃಷ್ಟಿ ಯೂ ಕೂಡಿದ ಮೇಲೆ ತಾರಾನಾಥನು ಅವನಿಗೆ ಪ್ರಣಾಮವನ್ನು ಮಾಡಿದನು.

ಶಿಷ್ಟಾಚಾರಕ್ಕನುಸಾರವಾಗಿ ಏನನ್ನಾದರೂ ಮಾ ತಾಡಬೇಕೆಂದು ಮನೋಹರನು "ನಿಮಗೆ ಕೀರ್ತನೆ ಅಂದರೆ ವಿಶೇಷ ಆದರವಿರಬಹುದಲ್ಲವೇ" ಎಂದನು. ತಾರಾನಾಥನು ಕೂಡಲೆ "ಛೆ, ಛೆ, ನನಗೇನೂ ಕೀ ರ್ತನೆಯನ್ನು ಕೇಳುವ ಹುಚ್ಚು ಇಲ್ಲ. ನನ್ನ ಅಕ್ಕನ ಮಗಳು ಊರು ನೋಡಲು ಬಂದಿರುತ್ತಾಳೆ. ಅವಳು ಇಲ್ಲಿ ಬರುವುದಕ್ಕೋಸ್ಕರ ನನ್ನನ್ನು ವತ್ತಾಯಪಡಿಸಿ ದಳು. ಅದಕ್ಕೋಸ್ಕರ ಅವಳೊಡನೆ ಬಂದೆ, ಅಷ್ಟೆ" ಎಂದನು. ಮಾತನಾಡುತ್ತಿರುವಾಗ ಅವನ ದೃಷ್ಟಿಯು ಎಲ್ಲಾ ಮಲ್ಲಿಕೆಯ ಕಡೆಗೇ ಇತ್ತು. ಸಹಜವಾಗಿ

ಮನೋಹರನೂ ಅತ್ತಕಡೆಗೆ ನೋಡಿದನು. ನೋಡಿ ಅಲ್ಲಿಯೇ ಮುಗ್ಧನಾದನು!

ಮಲ್ಲಿಕೆಯು ಸಹಜವಾಗಿ ಸುಂದರಿ. ನಾಲದುದಕ್ಕೆ ನವೀನ ವಸ್ತ್ರಾಲಂಕಾರ. ಕೀರ್ತನೆಯನ್ನು ಕೇಳಿದುದರಿಂದುಂಟಾದ ಸಂತೋಷವು ಅವಳ ಮುಖದಲ್ಲಿ ತಾನೆಂದು ಪ್ರಕಟವಾಗುತಿತ್ತು ಆದಕಾರಣ ಅವಳು ಆ ದಿನ ಸಾಕ್ಷಾತ್ ರಂಭೆಯಂತೆ ಕಾಣುತ್ತಿದ್ದಳು. ಮನೋಹರನು ಇದು ವರೆಗೂ ದುರ್ವರ್ತನೆಗಳಿಗೆ ಅಧೀನನಾಗದಿದ್ದರೂ ಮಲ್ಲಿಕೆಯನ್ನುಕಂಡೊಡನೆ ಚಂಚಲನಾಗಿ ಹೋಗಿಬಿಟ್ಟನು! ಇದನ್ನು ತಾರಾನಾಥನು ಕಂಡುಹಿಡಿದನು. ಮತ್ತು ತಾನು ರಚಿಸಿದ ಕಲ್ಪನೆಯಲ್ಲಿ ಸಂಶಯವಿಲ್ಲೆಂದು ಮನಸ್ಸಿನೊಳಗೆ ಉಬ್ಬಿಕೊಂಡನು. ಸ್ವಲ್ಪ ಹೊತ್ತಿನಲ್ಲಿಯೇ ಮನೋಹರನು ಅಲ್ಲಿಂದೆದ್ದು ಬೇರೊಂದು ಕಡೆಯಲ್ಲಿ ಕುಳಿತುಬಿಟ್ಟನು. ಆದರೆ ತಾರಾನಾಥನು ಎಲ್ಲಿ ಬಿಟ್ಟಾನು? ಅವನು ಕೂಡಲೇ ತನ್ನ ಸ್ನೇಹಿತನ ಜೊತೆಯಲ್ಲಿಯೇ ಕುಳಿತುಕೊಂಡನು.

ಸಾಧಾರಣ ಎಂಟು ಘಂಟೆಯ ಹೊತ್ತಿಗೆ ಹರಿಕೀರ್ತನೆಯು ಮುಗಿಯಿತು. ಕೀರ್ತನೆಯ ಅಂತ್ಯದಲ್ಲಿ ಕೀರ್ತನಕಾರನು ಕೊಟ್ಟ ಸ್ಫೂರ್ತಿದಾಯಕವಾದ ಭಾಷಣದಿಂದ ಬಂದಿದ್ದವರಲ್ಲಿ ಅನೇಕರು ಕಣ್ಣೀ

ರು ಸುರಿಸಲಾರಂಭಿಸಿದರು. ಮಲ್ಲಿಕೆಗೂ ಸಹಜವಾಗಿ ಕಣ್ಣೀರು ಬಂತು. ಜನರೆಲ್ಲರೂ ಮನೆಗಳಿಗೆ ಹೋದರು. ಮಲ್ಲಿಕೆಯು ಮಾತ್ರ 'ಗರ್ಭಗೃಹ'ದಲ್ಲಿನ ಶ್ರೀರಾಮ ಮೂರ್ತಿಯನ್ನು ನೋಡುವುದರಲ್ಲಿಯೇ ತನ್ಮಯಳಾಗಿ ಹೋದಳು ತಾರಾನಾಥನು ಬಂದು ಕರೆದ ಕೂಡಲೇ ಥಕ್ಕನೆ ಎಚ್ಚತ್ತಂತಾಗಿ ಅವನ ಸಂಗಡ ನಡೆದಳು. ಮಲ್ಲಿಕೆಯು ಸುರಿಸುತ್ತಿದ್ದ ಕಣ್ಣೀರನ್ನು ನೋಡಿ ತಾರಾನಾಥನು ಉಪಹಾಸ್ಯದ ನೋಗನ್ನು ತಂದುಕೊಂಡು "ಏನೆ ಹುಚ್ಚಿ! ಕೀರ್ತನೆಯನ್ನು ಇಷ್ಟರ ಮಟ್ಟಿಗೆ ಮನಸ್ಸಿಗೆ ಹಚ್ಚಿಕೊಳ್ಳುವವರು ಯಾರಾದರೂ ಇರುವರೇ? ಪುರಾಣದಲ್ಲಿನ ಬದನೆಕಾಯಿ ಎಂದು ಹೇಳುವುದಿಲ್ಲವೇ? ಅಷ್ಟೇ. ಸುಮ್ಮನೆ ಹೊತ್ತು ಹೋಗಲು ಕೇಳುವುದು. ಹೊರಗೆ ಬರುವಾಗ ಅಲ್ಲಿಯೇ ಬಿಟ್ಟುಬರುವುದು. ಇನ್ನೇನು?" ಎಂದನು ಮಲ್ಲಿಕೆಗೆ ಸ್ವಲ್ಪ ಲಜ್ಜೆಯಾಯಿತು. ಅವಳು ಮಾವನ ಹಿಂದೆಯೇ ನಡೆದಳು. ಇಬ್ಬರೂ ಹೊರಗೆ ಬಂದರು. ಮನೋಹರನು ಇನ್ನೂ ಮೋಟಾರಿನ ಬಳಿಯೇ ನಿಂತುಕೊಂಡಿದ್ದನು. ಅವನ ಹತ್ತಿರ ಹೋಗಿ ತಾರಾನಾಥನು ನಮಸ್ಕಾರ ಮಾಡಲು, ಮನೋಹರನು 'ನೀವೆಲ್ಲಿಗೆ ಹೋಗುತ್ತೀರಿ? 'ಲೆಮಿಂಗ್ಟನ್' ರೋಡಿಗೆ ಅಲ್ಲವೇ? ಆಕ್ಷೇಪವಿಲ್ಲದಿದ್ದರೆ ನನ್ನ ಕಾರಿನಲ್ಲಿಯೇ ಬನ್ನಿರಿ.

ನನಗೂ ಅದೇ ದಾರಿಯಲ್ಲಿ ಹೋಗಬೇಕಾಗಿದೆ.' ಎಂದನು. ಮನೋಹರನ ಈ ಅನಿರೀಕ್ಷಿತವಾಗಿದ್ದ ಮಾತುಗಳನ್ನು ಕೇಳುತ್ತಲೇ ತಾರಾನಾಥನಿಗೆ ಮನಸ್ಸಿನಲ್ಲಿ ಬಹಳ ಸಂತೋಷವಾಯಿತು. ಆದರೂ ಹೊರಗೆ ಸ್ವಲ್ಪ ಹಿಂತೆಗೆದಂತೆ ನಟಿಸಿ, ಅನಂತರ ಕೃತಜ್ಞತೆಯಿಂದ ತಲೆಬಾಗಿಸಿ ಮಲ್ಲಿಕೆಯೊಂದಿಗೆ ಮೋಟಾರಿನಲ್ಲಿ ಕುಳಿತು ಕೊಂಡನು.

ಈ ನವೀನಪ್ರಕಾರದ ವರ್ತನೆಯಿಂದ ಮಲ್ಲಿಕೆಯು ಮೊದಲು ಸ್ವಲ್ಪ ದುಃಖಿತಳಾದಳು. ಆದರೆ ಮೋಟಾರು ಹೋಗುತ್ತಿರುವಾಗ ಕೀರ್ತನೆಯಲ್ಲಿನ ಎಲ್ಲಾ ಮಾತುಗಳು, ಮಹಾನಂದೆಯ ದೃಢನಿಶ್ಚಯ, ಇವೆಲ್ಲ ಸಂಗತಿಗಳನ್ನು ಮನಸ್ಸಿನಲ್ಲಿ ವಿಚಾರಮಾಡುತ್ತಾ, ದಾರಿ ಸಾಗಿತು. ಕಡೆಗೆ ಇವರ ಮನೆಯ ಬಾಗಿಲಲ್ಲಿ ಇವರಿಬ್ಬರನ್ನೂ ಇಳಿಸಿ ಮನೋಹರನು ಮುಂದುವರಿದನು. ಆದರೆ ಅವನ ಚಿತ್ತವೆಲ್ಲವೂ ಮಲ್ಲಿಕಯ ಮೇಲೆ ಸ್ಥಿರವಾಗಿತ್ತು.

೯

ಮಲ್ಲಿಕಯ ಶಾಂತವಾಗಿದ್ದ ಆಯುಷ್ಯಸಾಗರದಲ್ಲಿ ಕಠಿಣವಾದ ಅಲೆಗಳು ಈಗ ತಾನೆ ಬರಲಾರಂಭಿಸಿದುವು. 'ರಾಮಮಂದಿರ'ದಲ್ಲಿ ಕೀರ್ತನೆಯನ್ನು ಕೇಳಿದಂದಿನಿಂದ ಅವಳ ಮಾನಸಿಕ ವೃತ್ತಿಯು ಬದಲಾಯಿ

ತು ರಾತ್ರಿಹಗಲೆನ್ನದೆ ಓದುತ್ತಾ ಇದ್ದ ಮಲ್ಲಿಕೆಯು ಈಗ ರಾತ್ರಿಹಗಲು ತನ್ನ ಕೋಣೆಯೊಳಗೆ ವಿಚಾರ ಪರಳಾಗಿ ಕುಳಿತುಕೊಳ್ಳುವಳು. 'ವೇಶ್ಯಾವ್ಯವಸಾಯ ವನ್ನು ಎಂದಿಗೂ ಸ್ವೀಕರಿಸಲೊಲ್ಲೆನು' ಎಂದು ಅವಳು ಆಗಲೇ ನಿಶ್ಚಯಿಸಿದಳು. ಆದರೆ ಇದರಿಂದ ಯಾವ ಯಾವ ಕಠಿಣ ಪ್ರಸಂಗಗಳು ಬರುವುವೋ, ಅವುಗಳನ್ನು ನಿವಾರಿಸುವ ಬಗೆ ಹೇಗೆ? ಎಂದು ಆಲೋಚಿಸುವಳು.

"ನಮ್ಮ ಜಾತಿಯಲ್ಲಿ ಉಚ್ಚಶಿಕ್ಷಣವನ್ನು ಪಡೆದು ಸಮಾಜದ ಉನ್ನತ ಪದವಿಯನ್ನು ಪಡೆದ ಪುರುಷರು ಬಹಳ ಸ್ವಲ್ಪವಾಗಿರಬಹುದು ಅಂಥವರು ನಮ್ಮ ಕುಲ ವೃತ್ತಿಯ ಕುರಿತು ಆಲೋಚನೆ ಮಾಡಿದರೆ ಎಷ್ಟು ನಾಚಿಕೆ ಪಡುವರೋ? ಹೀಗಾಗಿ ಅವರು ತಮ್ಮ ಜಾತಿಯಿಂದ ಪಾರಾಗಿ ಬೇರೆ ಜಾತಿಯವರಲ್ಲಿ ಸೇರುವ ಪ್ರಯತ್ನ ಮಾಡುವರೇನು? ಅಂತಹ ಒಬ್ಬ ಸುಶೀಲ ಪುರುಷನಾದರೂ ನನ್ನನ್ನು ವಿವಾಹ ಮಾಡಿಕೊಳ್ಳ ಲಾರನೆ? ಇಲ್ಲವಾದರೆ ಜನ್ಮಾಂತ್ಯದ ವರೆಗೂ ಅವಿವಾ ಹಿತಳಾಗಿ ಇರಬೇಕಲ್ಲವೇ? ಗಾಯನ, ನರ್ತನವನ್ನು ಮಾಡಿ ಜೀವನೋಪಾಯವನ್ನು ನಡೆಯಿಸಿದರೂ ನಾನು ಲೋಕದ ಕಣ್ಣುಗಳಿಗೆ ವೇಶ್ಯೆ ಎಂದು ತಿಳಿಸಿದಂತಾಗು ತ್ತದೆಯಲ್ಲವೇ?" ಇವೇ ಮೊದಲಾದ ವಿಚಾರತರಂಗ ಗಳು ಅವಳಲ್ಲಿ ಬರುತ್ತಿದ್ದುವು.

ಮೂರು ನಾಲ್ಕು ದಿನಗಳ ಹಿಂದೆ ಓದಲಿಕ್ಕೆಂದು ಕೈಯಲ್ಲಿ ಹಿಡಿದ ಪುಸ್ತಕವನ್ನು ಈಹೊತ್ತಾದರೂ ಓದಿ ಮುಗಿಸುವೆನೆಂದು ಅವಳು ತನ್ನ ಕೋಣೆಯೊಳಗೆ ಹೋದಳು ಆದರೆ ಅವಳ ವಿಚಾರವು ಎಂದಿನಂತೆಯೆ ಪ್ರಾರಂಭವಾಯಿತು. ಅದರಿಂದ ಏನಾದರೂ ನಿಶ್ಚಿತವಾಗದೆ ತಳಮಳಿಸುತ್ತಿದ್ದಳು ಅಷ್ಟರಲ್ಲಿ ಗಿರಿಜೆಯು ಒಳಗೆ ಬಂದಳು. ಕತ್ತಲಾದರೂ ದೀಪವನ್ನು ಹಚ್ಚದೆ ಕುಳಿತಿದ್ದ ಮಲ್ಲಿಕೆಯನ್ನು ಕಂಡು "ಇಂತಹ ವಿಚಾರಗಳಿಂದ ಏನು ಮಾಡಬೇಕೆಂದಿರುವೆಯಮ್ಮಾ? ದೀಪ ಹಚ್ಚುವ ಜ್ಞಾನವು ಕೂಡ ನಿನಗಿಲ್ಲದೆ ಹೋಯಿತೆ?" ಎಂದು ಹೇಳಿ 'ಬಟನ್' ಒತ್ತಿ ದೀಪ ಉರಿಸಿದಳು ಮತ್ತು ತನ್ನ ಮಗಳ ಹತ್ತಿರವೇ ಕುಳಿತುಕೊಂಡು ಬಹಳ ಪ್ರೀತಿಯಿಂದ "ಮಗೂ, ಬೆಂಗಳೂರಿಗೆ ಬಂದಂದಿನಿಂದ ನಿನಗೇನು ಹುಚ್ಚು ಹಿಡಿದಿದೆಂದು ತಿಳಿಯುವುದಿಲ್ಲವಲ್ಲ. ನಾನೂ, ತಾರಾನಾಥನೂ ನಿನಗಾಗಿ ಎಷ್ಟು ಕಷ್ಟಪಡುತ್ತಿರುವೆವೆಂಬುದು ನಿನಗಾದರೂ ಗೊತ್ತಿದೆಯೇ? ನಿನಗದರ ಬೆಲೆಯೇ ಇಲ್ಲವಲ್ಲ! ನೀನು ಯಾವಾಗ ನೋಡಿದರೂ ವಿಚಾರಮಗ್ನಳಾಗಿ ಕುಳಿತುಕೊಳ್ಳುವೆ. ಮುಕ್ತಾಪುರದಲ್ಲಿರುವಾಗ ಗಾಯನ, ನರ್ತನದ ಹೊರತು ನಿನಗೆ ಬೇರೇನು ಗೊತ್ತಿರಲಿಲ್ಲ. ಈಗಲಾದರೋ ನೀನು ಎಂದು ನೋಡಿ

ದರೂ ಆ ಸುಟ್ಟಪುಸ್ತಕಗಳನ್ನು ಓದುವುದರಲ್ಲಿಯೂ ಅರ್ಥವಿಲ್ಲದ ಆಲೋಚನೆಗಳನ್ನು ಮಾಡುವುದರಲ್ಲಿಯೂ ದಿವಸಗಳನ್ನು ಕಳೆಯುತ್ತಿರುವೆ. 'ಸಾರಂಗ'ದ ಪೆಟ್ಟಿಗೆಯ ಮೇಲೆ ಜೇಡರ ಹುಳುಗಳು ಮನೆಮಾಡಿಕೊಂಡಿರುವುವು. ಹಾಡುವುದಂತೂ ಇಲ್ಲವೇ ಇಲ್ಲ. ಅಮ್ಮಾ, ಸಂಗೀತವೆಂದರೆ ದಿನಾಲೂ ಹೇಳಿದರೇನೇ ತಿದ್ದುವುದು. ಇಲ್ಲವಾದರೆ ಹಾಗೆಯೇ ಅಂತರ್ಧಾನವಾಗುವುದು. ನಿನ್ನ ಸಂಗೀತಕ್ಕೋಸ್ಕರ ನನ್ನಲ್ಲಿದ್ದ ಅಲ್ಪಸ್ವಲ್ಪ ಹಣವನ್ನು ಸಂಗೀತಗಾರರಿಗೆ ಕೊಟ್ಟು ಖರ್ಚುಮಾಡಿದೆ. ಅಂದ ಮೇಲೆ ಈ ಕಲೆಯನ್ನು ಸುಮ್ಮನೆ ಹಾಳುಮಾಡಿಕೊಳ್ಳಬೇಕೆನ್ನುತ್ತೀಯಾ? ಅದರಲ್ಲೇ ನಮ್ಮ ಜೀವನವಲ್ಲವೇ? ಈ ಹೊತ್ತು ನಮ್ಮ ತಾರಾನಾಥನ ಗೆಳೆಯ ಮನೋಹರರಾಯನು ಹೊರಗೆ ಬಂದು ಕುಳಿತಿರುವನು. ಅವನಿಗೆ ಸಂಗೀತವೆಂದರೆ ಬಹಳ ಇಷ್ಟವಂತೆ ಅದೂ ಅಲ್ಲದೆ ಶ್ರೀಮಂತ ಗೃಹಸ್ಥನು. ನಡೆ, ಹೊರಗೆ ಹೋಗೋಣ. ಸ್ವಲ್ಪ ಸಮಯ 'ತಂಬೂರಿ'ಯನ್ನು ಬಾರಿಸಿ ಹಾಡುವಿಯಂತೆ" ಎಂದು ಹೇಳಿದಳು.

ಇಷ್ಟು ಹೊತ್ತಿನ ವರೆಗೆ ಶಾಂತತೆಯಿಂದ ತಾಯಿಯ ಭಾಷಣವನ್ನು ಕೇಳುತ್ತಿದ್ದ ಮಲ್ಲಿಕೆಯು ಮನೋಹರನ ಹೆಸರು ತೆಗೆದ ಕೂಡಲೇ ರೇಗಿಹೋದಳು. ಅವಳು ತಿರಸ್ಕಾರದಿಂದಲೂ, ನಿಶ್ಚಯಸೂಚಕವಾದ ಸ್ವರ

ದಿಂದಲೂ "ಅಮ್ಮಾ! ನಿನ್ನ ಮತ್ತು ತಾರಾನಾಥನ ದುರಾಲೋಚನೆಗಳು ನನಗಾಗಲೇ ತಿಳಿದಿವೆ. ನಾನು ಮಾತ್ರ ಅವರನ್ನು ಮೆಚ್ಚಿಸಲು ಎಂದೂ ಹಾಡಲಾರೆನು" ಎಂದಳು.

ಗಿರಿಜೆಯು ತನ್ನ ಉಪದೇಶವನ್ನು ಪುನಃ ಕೊಡಲಾರಂಭಿಸಿದಳು. "ನಿನಗೆ ಏನೋ ಪಿತ್ತವು ತಲೆಗೇರಿದಂತಿದೆ. ನಿನ್ನ ಈ ಅಜ್ಞಾನ ಸ್ವಭಾವದಿಂದ ನನ್ನ ಅನಂತರ ನೀನು ಹೇಗೆ ಜೀವನವನ್ನು ನಡೆಸುವಿ ಎಂಬ ಯೋಚನೆ ನನಗೆ ಹಿಡಿದಿದೆ. ಅಮ್ಮಾ, ದೇವರು ನಮಗೆ ಉಚಿತಾರ್ಥವಾಗಿ ಕೊಟ್ಟ ಈ ಅಲ್ಪಸ್ವಲ್ಪ ವಿದ್ಯೆಯನ್ನು ನಾವು ಲೋಕದಲ್ಲಿ ಇತರರ ಮನಸ್ಸನ್ನು ಆಹ್ಲಾದಗೊಳಿಸುವುದಕ್ಕಾಗಿ ಉಪಯೋಗಿಸಬೇಡವೇ? ತಾರಾನಾಥನು ಬಹಳ ಅಭಿಮಾನದಿಂದ ನಿನ್ನ ಚಾತುರ್ಯವನ್ನು ಮನೋಹರರಾಯನ ಕೂಡೆ ಹೇಳಿದ್ದನಂತೆ. ಅದಕ್ಕೋಸ್ಕರ ಅಷ್ಟು ಶ್ರೀಮಂತನಾದರೂ ತಾನಾಗಿ ನಮ್ಮ ಮನೆಗೆ ಕುತೂಹಲದಿಂದ ಬಂದರೆ ನೀನು ಹಾಡಬಾರದೇಕೆ? ಅದು ಕೂಡ ತಾರಾನಾಥನ ಸ್ನೇಹಕ್ಕೋಸ್ಕರ! ಇಲ್ಲದಿದ್ದರೆ ಬರುತ್ತಿದ್ದಿಲ್ಲ, ತಿಳಿಯಿತೆ? ಈಗ ನಾವು ಆತನನ್ನು ಅಪಮಾನ ಮಾಡುವುದು ಸರಿಯಲ್ಲ. ನಿನಗೆ ಈ ಬುದ್ಧಿ ಎಲ್ಲಿಂದ ಬಂತು? ನಮ್ಮ ಜಾತಿಗೆ ಇದು ಶೋಭಿಸುವುದೇ? ಇದು ನಿನಗೆ ಭಿಕ್ಷಾಮಾರ್ಗವನ್ನು ತೋರಿಸುವುದಕ್ಕೇನೇ ಬಂದಿದೆ!"

"ಅಮ್ಮಾ! ನಾನು ನನ್ನ ನಿಶ್ಚಯವನ್ನು ನಿನಗೆ ಸ್ಪಷ್ಟವಾಗಿ ಅಂದೇ ಹೇಳಿರುತ್ತೇನೆ. ನೀವಿಬ್ಬರೂ ನನ್ನ ಸಂಗೀತವನ್ನು ಕೇಳುವುದಕ್ಕೋಸ್ಕರ ಮನೋಹರರಾಯರನ್ನು ಕರತರುವ ಆಲೋಚನೆಯಲ್ಲಿದ್ದಾಗಲೇ ನಾನು ಅದನ್ನು ಉಲ್ಲಂಘಿಸಿರುವೆನು. ನೀವು ಕೇಳದೆ ಅವರನ್ನು ಕರತಂದು ಅಪಮಾನ ಮಾಡಿದ್ದರೆ, ಆ ಜವಾಬ್ದಾರಿಯು ನಿಮ್ಮ ಮೇಲಲ್ಲದೆ ನನ್ನ ಮೇಲೆ ಇಲ್ಲ"

ಮಲ್ಲಿಕೆಯು ಎಷ್ಟು ಹೇಳಿದರೂ ಗಿರಿಜೆಯು ಅನೇಕ ರೀತಿಯಿಂದ ಅವಳ ಮನಸ್ಸನ್ನು ತಿರುಗಿಸಲು ನೋಡಿದಳು. ಆದರೂ ನಿಷ್ಫಲವಾದುದರಿಂದ ಸಿಟ್ಟಾಗಿ ಹೊರಗೆ ಹೋಗಿ "ಏನು ಮಾಡಲಿ? ಮಲ್ಲಿಕೆಗೆ ಈ ಹೊತ್ತು ಮೈ ಚೆನ್ನಾಗಿಲ್ಲ. ಸ್ವಲ್ಪ ಜ್ವರವೂ ಬಂದಿದೆ." ಎಂದು ತನ್ನ ತಮ್ಮನೊಡನೆ ಹೇಳಿದಳು. ಈ ವಾಕ್ಯವು ಒಳಗಿದ್ದ ಮಲ್ಲಿಕೆಯ ಕಿವಿಗೆ ಬೀಳದೆ ಹೋಗಲಿಲ್ಲ.

## ೧೦

ಮಲ್ಲೇಶ್ವರದಲ್ಲಿ ಹರಿಕೀರ್ತನೆಯಾದ ದಿನದಿಂದ ತಾರಾನಾಥನ ಮತ್ತು ಮನೋಹರನ ಸ್ನೇಹವು ಬಹಳ ಅತ್ಯಂತವಾಗಿ ಅವರು ಜೀವದ ಗೆಳೆಯರೇ ಎಂಬಂತೆ ಆಗಿದ್ದನ್ನು ನೋಡಿ ಯಾರಿಗೂ ಆಶ್ಚರ್ಯವಾಗದೇ ಇರಲಿಲ್ಲ. ಒಂದಲ್ಲ ಒಂದು 'ಜರೂರು' ಕೆಲಸದ ನೆವನವನ್ನು ಹೇಳಿ ಮನೋಹರನು ದಿನಕ್ಕೊಂದು ಸಲವಾ

ದರೂ ತಾರಾನಾಥನ 'ಕೃಷ್ಣಭವನ'ಕ್ಕೆ ಬಾರದೆ ಇರು ತ್ತಿರಲಿಲ್ಲ. ತಾರಾನಾಥನೂ ಮನೆಗೆ ಬಂದ ಕೂಡಲೇ "ಈ ಹೊತ್ತು ಆ ಜವಾಹಿರತಿ ಮಾರುವ ಅಂಗಡಿಗೆ ಮನೋಹರನೊಂದಿಗೆ ಹೋಗಿದ್ದೆ; ನಾಳೆ ನಾಟಕಕ್ಕೆ ಬರಲು ಅವನು ಬಹಳ ಆಗ್ರಹಮಾಡುತ್ತಿದ್ದಾನೆ. ಏನು ಮಾಡಲಿ? ಹೋಗಬೇಕಾಯಿತು" ಎನ್ನುವನು.

ಮೊದಲು ಮೊದಲು ಮನೋಹರನ ವಿಷಯವಾಗಿ ಏನಾದರೂ ಮಾತನಾಡಿದರೆ ಮಲ್ಲಿಕೆಯು ಉತ್ಸುಕತೆ ಯನ್ನು ತೋರಿಸಬಹುದೆಂದು ತಾರಾನಾಥನು ತಿಳಿ ದಿದ್ದನು. ಆದರೆ ಅವಳ ಮೇಲೆ ಯಾವ ಪರಿಣಾ ಮವೂ ಆದಂತ ಕಂಡುಬರಲಿಲ್ಲ! ಬದಲಾಗಿ ಅವನು ಮನೆಗೆ ಬಂದರೆ ಕಾಫಿಯನ್ನಾಗಲೀ, ಎಲೆಅಡಿಕೆಯ ನ್ನಾಗಲೀ ಕೊಡಲು ಇವಳೊಡನೆ ಹೇಳಿದರೆ ತಿರಸ್ಕರಿ ಸುವಳು. ಆದುದರಿಂದ ಅವಳಿಗೆ ಕುಲಾಚಾರದಂತೆ ವರ್ತಿಸಲು ಹೇಳಿ ಶ್ರೀಮಂತರ ಸ್ನೇಹದಿಂದ ಮುಂದಕ್ಕೆ ಎಷ್ಟು ಸುಖಪಡೆಯಬಹುದೆಂದು ಹೇಳಬೇಕೆಂದು ಇಬ್ಬರೂ ನಿಶ್ಚಯಮಾಡಿದರು.

ಒಂದುದಿನ ಮಲ್ಲಿಕೆಯು ಸಂತೋಷದಲ್ಲಿರುವ ದನ್ನು ಕಂಡು ಗಿರಿಜೆಯು "ನೀನೇನೂ ಈಗ ಚಿಕ್ಕ ಬಾಲಿಕೆಯಲ್ಲ. ನಿನಗಿದೆಲ್ಲಾ ಈಗಲಾದರೂ ತಿಳಿಯ ಬೇಕು" ಎಂದು ಪ್ರಾರಂಭಿಸಿ ಉದ್ದುದ್ದವಾದ ಭಾಷಣ

ಮಾಡಿ ವೇಶ್ಯಾವೃತ್ತಿಯಿಂದುಟಾಗುವ ಸುಖಸೌಭಾಗ್ಯ ಗಳನ್ನು ವರ್ಣಿಸಲು ಮೊದಲುಮಾಡಿದಳು. ಇದನ್ನೆಲ್ಲಾ ಮಲ್ಲಿಕೆಯು ಸ್ವಲ್ಪಹೊತ್ತಿನ ವರೆಗೆ ಆಲಿಸುತ್ತಿದ್ದು ಕಡೆಗೆ "ನಾನು ನಿಶ್ಚಯಮಾಡಿದಂತೆ ಸದಾಚಾರದಿಂದ ಒಂದು ಹೆಜ್ಜೆ ಕೂಡಾ ಹಿಂಜರಿಯಲಿಕ್ಕಿಲ್ಲ" ಎಂದು ಸ್ಪಷ್ಟವಾಗಿ ಹೇಳಿಬಿಟ್ಟಳು. ಇದನ್ನು ಕೇಳಿ ಅವಳ ದೇಹದಲ್ಲಿ ಭೂತಸಂಚಾರವಾಗಿದೆಯೋ ಏನೋ ಎಂದು ಗಿರಿಜೆಯೂ, ತಾರಾನಾಥನೂ ಸಂಶಯಪಟ್ಟರು! ಅವಳ ನಡತೆಯಲ್ಲಿ ಮೂರು ನಾಲ್ಕು ತಿಂಗಳುಗಳಿಂದ ಉಂ ಟಾದ ಬದಲಾವಣೆಗಳಾದರೂ ಅವಳಲ್ಲಿ ಅಷ್ಟು ದೃಢ ವಾದ ಸಂಕಲ್ಪವನ್ನು ಮಾಡಿರಬಹುದೆಂದು ಅವರಿ ಬ್ಬರೂ ಗ್ರಹಿಸಿರಲಿಲ್ಲ! ಇಷ್ಟಾದರೂ ಮಲ್ಲಿಕೆಯ ಮನ ಸ್ಸನ್ನು ತಿರುಗಿಸುವ ಪ್ರಯತ್ನವನ್ನು ಅವರು ಬಿಡಲಿಲ್ಲ. ಚಿಕ್ಕ ವಯಸ್ಸಿನ ಮಲ್ಲಿಕೆಯನ್ನು ಇನ್ನಾದರೂ ತಿರು ಗಿಸಲು ಮಾರ್ಗವಿದೆ ಎಂದು ಅವರಿಗೆ ಭರವಸೆಯಿತ್ತು.

ಐದು ಆರು ದಿನಗಳು ಕಳೆದುವು. ಮನೋಹರ ನಿಗೆ ಅಪಮಾನ ಮಾಡಿದುದಕ್ಕಾಗಿ ಗಿರಿಜೆಯೂ ತಾರಾ ನಾಥನೂ ಮಲ್ಲಿಕೆಯ ಮೇಲೆ ಬಹಳ ಸಿಟ್ಟಾಗಿದ್ದರು. ಅವಳನ್ನು ಕುಲವೃತ್ತಿಗೆ ತಿರುಗಿಸುವುದಕ್ಕಾಗಿ ಅವರು ನಾನಾ ತರದ ಉಪಾಯಗಳನ್ನು ಹುಡುಕಲಾರಂಭಿಸಿ ದರು. ಮರುದಿನದಿಂದ ಮಲ್ಲಿಕೆಯನ್ನು ನೋಡಿದ

ಕೂಡಲೇ ಹುಬ್ಬುಗಳನ್ನು ಗಂಟಿಕ್ಕಿ ಮನಸ್ಸಿಗೆ ಬಂದಂತೆ ಮಾತನಾಡಲು ಪ್ರಾರಂಭಿಸಿದರು ಆದರೂ ಆವಳು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಕೆಲವು ದಿವಸಗಳ ಅನಂತರ ಎಲ್ಲದಕ್ಕೂ ಉತ್ತಮ ಔಷಧಿಯಾದ 'ತ್ಯಾಗ'ವನ್ನು ಗಿರಿಜೆಯು ಮಾಡಲಾರಂಭಿಸಿದಳು. ದಿನದಲ್ಲಿ ಒಂದು ಹನಿ ನೀರನ್ನಾದರೂ ತೆಗೆದುಕೊಳ್ಳದೆ, ಇಡೀ ದಿನ ಕಣ್ಣೀರು ಸುರಿಸುತ್ತ ಕೋಣೆಯೊಳಗೆ ಮಲಗಿಕೊಳ್ಳುವಳು. ಇದನ್ನೇ ದಿನಚರಿ ಪ್ರಾರಂಭಿಸಿದುದನ್ನು ನೋಡಿ ಮಲ್ಲಿಕೆಯು ಬಹಳ ತಾಪಗೊಂಡಳು. ಚಿಕ್ಕಂದಿನಿಂದ ಬಹಳ ಪ್ರೀತಿಯಿಂದ ತನ್ನನ್ನು ಸಲಹಿದ್ದು ವೃದ್ಧಾಪ್ಯದಲ್ಲಿ ತನಗೋಸ್ಕರ ಈ ರೀತಿ ಕಷ್ಟ ಪಡುವುದಕ್ಕಾಯಿತಲ್ಲವೇ ಎಂದು ಬಹಳ ನೊಂದಳು. ಆದರೆ ತನ್ನ ತಾಯಿಯ ಪ್ರಾಣಕ್ಕೋಸ್ಕರ ತನ್ನ ಜೀವಿತವನ್ನು ಕಲಂಕ ಮಾಡಿಕೊಳ್ಳಲು ಅವಳ ಮನಸ್ಸು ಒಡಂಬಡಲಿಲ್ಲ. ತನ್ನ ನಿಶ್ಚಯದಿಂದ ಕದಲದೆ, ಗಿರಿಜೆಯನ್ನು ಸುಖಿಯಾಗಿ ಮಾಡುವ ಬೇರೊಂದು ಉಪಾಯವಿದ್ದರೆ ಆವಳು ಅದನ್ನು ಬಹಳ ಸಂತೋಷದಿಂದ ಅಂಗೀಕರಿಸುತ್ತಿದ್ದಳು. ಆದರೆ ಈಗ ಸಂಭವಿಸಿದ ಕಠಿಣ ಪ್ರಸಂಗದಿಂದ ಪಾರಾಗುವ ಯಾವ ಮಾರ್ಗವೂ ಆವಳಿಗೆ ಸೂಚಿಸಲಿಲ್ಲ

ಎರಡು ಮೂರು ದಿನಗಳಿಂದಂತೂ ಗಿರಿಜೆಯ ಸ್ಥಿತಿಯು ಶೋಚನೀಯವಾಯಿತು ಅನ್ನದ ತುತ್ತು,

ನೀರಿನ ತಟುಕು ಅವಳು ವಿಸರ್ಜಿಸಿದ್ದುದರಿಂದ ಎದ್ದು ಕುಳಿತುಕೊಳ್ಳಲು ಕೂಡ ಅಸಮರ್ಥಳಾದಳು. ತಾರಾನಾಥನು ಧಿಟ್ಟ ಪುರುಷನಾದರೂ ಅಕ್ಕನ ಈ ಸ್ಥಿತಿಯನ್ನು ನೋಡಿ ಧೈರ್ಯಕುಂದಿದವನಾದನು ಅವಳ ಸಮೀಪವೇ ಕುಳಿತುಕೊಂಡು ಅಳುವುದೊಂದೇ ಅವನ ಈಗಿನ ಕೆಲಸವಾಯಿತು. ಒಂದೇ ಒಂದು ಗುಟುಕು ಹಾಲನ್ನಾಗಲೀ, ಕಾಫಿಯನ್ನಾಗಲೀ ತೆಗೆದುಕೊಳ್ಳುವಂತ ಅವನು ಅವಳನ್ನು ಬಹಳ ಆಗ್ರಹ ಮಾಡುವನು. ಆದರೆ ಗಿರಿಜೆಯು ದೃಢಸಂಕಲ್ಪವನ್ನೇ ಮಾಡಿದ್ದಳು. “ತಮ್ಮಾ! ನೀನಾದರೂ ನನಗಾಗಿ ಏತಕ್ಕಿಷ್ಟು ಮರುಗುತ್ತಿರುವಿ ಎಂದು ನನಗೆ ತಿಳಿಯುವುದಿಲ್ಲ. ದೇವರ ಸಾಕ್ಷಿಯಾಗಿ ಹೇಳುತ್ತೇನೆ, ನನಗೀಗ ಬದುಕಬೇಕೆಂಬ ಇಚ್ಛೆಯೇ ಇಲ್ಲ. ಜನ್ಮಧಾರಭ್ಯ ನಾನಾ ಕಷ್ಟಗಳನ್ನು ಸಹಿಸಿ, ಸಮಯ ಬಂದರೆ ಉಪವಾಸ ಕೂಡ ತೆಗೆದು ಬಹಳ ಪ್ರೇಮದಿಂದ ಯಾರನ್ನು ಪಾಲನೆಮಾಡಿದೆನೋ ಅಂಥವಳಿಗೆ ನನ್ನಮೇಲೆ ಎಂದು ಕರುಣೆ ಹುಟ್ಟುವುದಿಲ್ಲವೋ ಅಂದು ನಾನಾದರೂ ಏತಕ್ಕೋಸ್ಕರ ಬದುಕಲಿ? ನನಗಿನ್ನು ಯಾವ ಸುಖವನ್ನು ಅನುಭವಿಸಬೇಕಾಗಿದೆ? ದೇವಾ! ಒಂದುಸಲ ನನ್ನ ಕಣ್ಣನ್ನು ಮುಚ್ಚುವಂತೆ ಮಾಡು! ಇದೇ ನಾನು ಶ್ರೀ ಮಹಾಲಿಂಗೇಶ್ವರನೊಡನೆ ಮಾಡುವ ಪ್ರಾರ್ಥನೆ. ನನಗೆ

ಈ ಕಷ್ಟಗಳನ್ನು ಅನುಭವಿಸಲು ಸಾಧ್ಯವಿಲ್ಲ!" ಎಂದು ಹೃದಯದ್ರಾವಕವಾದ ಸ್ವರದಿಂದ ಹೇಳುವಳು. ಇದನ್ನು ಕೇಳಿ ತಾರಾನಾಥನು "ಬೇಡವಕ್ಕಾ ಬೇಡ. ಅಂತಹ ಅಶುಭವಚನಗಳನ್ನು ಆಡಬೇಡ. ನಿನ್ನ ಮಗಳಂತೆ ಎಲ್ಲರೂ ಪಾಷಾಣ ಹೃದಯಿಗಳೇ? ನಿನ್ನ ಮಾತುಗಳನ್ನು ಕೇಳಿದರೆ ನನಗೆ ಹೊಟ್ಟೆಯಲ್ಲಿ ಶೂಲಹಾಕಿದಂತಾಗುವುದು! ನಿನ್ನ ಮಗಳು ಒಳ್ಳೇ ಸುಖವನ್ನು ಅನುಭವಿಸಬೇಕೆಂದೂ ಅದನ್ನು ನೋಡಿ ನೀನಾದರೂ ಸುಖಿಯಾಗಿರಬೇಕೆಂದೂ ನಿಮ್ಮಿಬ್ಬರನ್ನು ಇಲ್ಲಿ ಕರಕೊಂಡು ಬಂದೆ. ನನ್ನಂಥ ನಿರ್ಭಾಗ್ಯನಿಗೆ ನಿಮ್ಮ ಗೊಡವೆಯೇ ಬೇಡವಿತ್ತು. ಈ ದುಃಖದಿಂದ ನಿನಗೇನಾದರೂ ಆದರೆ ನನ್ನ ಇಷ್ಟ ಮಿತ್ರರಿಗೆ ನಾನು ಹೇಗೆ ಮುಖ ತೋರಿಸಲಿ?" ಎಂದು ಹೇಳುವನು.

ಇದೇ ರೀತಿಯ ಪರಿಪಾಠವು ಅವರಲ್ಲಿ ಯಾವಾಗಲೂ ಜರಗುವುದಕ್ಕೆ ಪ್ರಾರಂಭವಾಯಿತು.

ಇದನ್ನೆಲ್ಲಾ ನೋಡಿ ಕೋಮಲ ಹೃದಯಳಾದ ಮಲ್ಲಿಕೆಯ ಸ್ಥಿತಿಯು ಭಯಂಕರವಾಯಿತು. ತನ್ನ ತಾಯಿಯ ಪ್ರಾಣಕ್ಕೆ ಈಗ ಖಂಡಿತವಾಗಿ ಅಪಾಯ ಬರುವ ಸಂಭವವಿದೆ, ಅದಕ್ಕೋಸ್ಕರವೇ ಅವಳು ಈ ವ್ರತವನ್ನು ಹಿಡಿದಿದ್ದಾಳೆಂದು ತಿಳಿದಿದ್ದಳು. ಅನೇಕ ವೇಳೆ ತಾಯಿಯ ಕಾಲು ಹಿಡಿದು ಹಾಗೆ ಮಾಡಬಾರ

ದಾಗಿ ಬೇಡಿಕೊಂಡಳು. ಆದರೆ ಗಿರಿಜೆಯು ಆ ಕಡೆ ಸ್ವಲ್ಪವಾದರೂ ಲಕ್ಷ್ಯಕೊಡಲಿಲ್ಲ. ತಾರಾನಾಥನಂತೂ "ಇಂಥ ಕೃತಘ್ನಳಾದ ಮಗಳ ಮುಖಾವಲೋಕನವನ್ನು ಮಾಡಿದರೆ ತನ್ನಕ್ಕನು ಪ್ರಾಣವನ್ನೇ ಬಿಡಬಹುದು" ಎಂದು ಹೇಳಿ ಅವಳು ದೂರವಿರುವ ಹಾಗೆ ಹೇಳಿದನು. ಕೊನೆಗೆ ಗಿರಿಜೆಯು ಸಮೀಪ ಕೂಡ ಇವಳನ್ನು ಹೋಗ ಗೊಡದೆ ತನ್ನ ಅಕ್ಕನು ಮಲಗಿದ್ದ ಕೋಣೆಯ ಕದ ಗಳನ್ನು ಮುಚ್ಚುವನು. ಮಲ್ಲಿಕೆಯಾದರೂ ತಾಯಿ ಯ ಕೊಠಡಿಯ ಹೊರಗೆ ನಿಂತು ಅವಳ ನರಳುವಿಕೆ ಯನ್ನು ಕೇಳುವಳು. ತನ್ನ ಮಾವನು ಅವಳನ್ನು ಸಮಾಧಾನ ಪಡಿಸಿ ಅಳುವುದನ್ನು ಕೇಳಿ ತಾನೂ ಅಳು ವಳು. ಇದಕ್ಕಿಂತಲೂ ಹೆಚ್ಚಾಗಿ ಏನುಮಾಡಬೇ ಕೆಂದು ಅವಳಿಗೆ ಸೂಚಿಸಲಿಲ್ಲ.

ಸಾಧು ಮಲ್ಲಿಕೆ! ಲೋಕದಲ್ಲಿ ಸ್ವಾರ್ಥಪರರಾದ ವರು ತಮ್ಮ ನೀಚ ಹೇತುವನ್ನು ಕೊನೆಗಾಣಿಸಲು ಎಲ್ಲಿ ಯವರೆಗೆ ಪ್ರಯತ್ನಮಾಡುವರೆಂದು ಅವಳಿಗೆ ಹೇಗೆ ತಿಳಿ ದೀತು? ತಾಯಿಯ ಪ್ರಾಣಾಂತಿಕ ಅವಸ್ಥೆಯನ್ನು ನೋ ಡಿ ಅವಳ ಹೃದಯವೇ ಒಡೆದು ಹೋಗುವಂತಾಯಿತು. ಆದರೆ ನಡುನಡುವೆ ತಾರಾನಾಥನು ಹಾಲಿನ ತಂಬಿಗೆ ಯನ್ನೇ ಅಕ್ಕನ ಬಾಯಿಯಲ್ಲಿ ಸುರಿಯುತ್ತಿರುವುದೂ ಬಿಕ್ಕಿಬಿಕ್ಕಿ ಅಳುತ್ತಿರುವಾಗಲೇ ಆಗಾಗ ಅವರಿಬ್ಬರ

ಮುಖದಲ್ಲಿ ದುಷ್ಟ ಹಾಸ್ಯತಲೆದೋರುವುದೂ, ನಿಶ್ಚೇಷ್ಟಳಾಗಿದ್ದಂತೆ ಬಿದ್ದ ಗಿರಿಜೆಯೂ ತಾರಾನಾಥನೂ ಫಕ್ಕನೆ ಪಿಸಿ ಪಿಸಿ ಮಾತನಾಡುವುದೂ ಮಲ್ಲಿಕೆಗೆ ಹೇಗೆ ಗೊತ್ತಾಗಬೇಕು? ಇಡೀ ದಿನವು, ಈ ರೀತಿ ಕಳೆಯಿತು ರಾತ್ರಿ ಸುಮಾರು ಎಂಟು ಘಂಟೆ ಸಮಯದಲ್ಲಿ 'ಅಕ್ಕಾ' ಎಂದು ಗಟ್ಟಿಯಾಗಿ ಹೃದಯದ್ರಾವಕವಾದ ಅರಚುವಿಕೆಯೊಂದು ಕೋಣೆಯೊಳಗಿಂದ ಕೇಳಿಬಂತು. ಇದನ್ನು ಕೇಳಿದ ಮಲ್ಲಿಕೆಯು ಪ್ರಜ್ಞಾಶೂನ್ಯಳಾದಂತಾದಳು. ಅವಳು ಧಡಧಡನೆ ತಾಯಿಯ ಕೊಠಡಿಗೆ ಬಂದಳು. ಅಲ್ಲಿಯ ಅವಸ್ಥೆಯನ್ನೆಲ್ಲಾ ನೋಡಿ ಅವಳ ಹೃದಯವೇ ಒಡೆಯಿತು! ದುಃಖಾತಿಶಯದಿಂದ ಅವಳ ಕಣ್ಣುಗಳಿಂದ ಗಳಗಳನೇ ನೀರು ಸುರಿಯಲಾರಂಭಿಸಿತು. ಗಿರಿಜೆಯು ಮೂರ್ಛಿತಳಾಗಿ ಕದಲದೆ ಬಿದ್ದಿದ್ದಳು! ಅವಳ ಕಣ್ಣುಗಳು ಬಿಳುಪಾಗಿದ್ದುವು ದಂತಪಂಕ್ತಿಯು ಒಂದಕ್ಕೊಂದು ಸೇರಿಹೋಗಿತ್ತು! ಅವಳನ್ನು ಎಚ್ಚರಗೊಳಿಸಲು ತಾರಾನಾಥನು ಬಿಕ್ಕಿಬಿಕ್ಕಿ ಅಳುತ್ತಾ ಒಂದರ ಹಿಂದೊಂದು ಉಪಚಾರವನ್ನು ಮಾಡುತ್ತಾ ಇದ್ದನು: —

ಮಲ್ಲಿಕೆಯು ತಾಯಿಯ ಸಮೀಪವೇ ಕುಳಿತುಕೊಂಡು, "ಅಮ್ಮಾ! ಅಮ್ಮಾ!" ಎಂದು ದೀನ ಸ್ವರದಿಂದ ಕರೆಯಲಾರಂಭಿಸಿದಳು. ಆದರೆ ತಾರಾನಾಥನು "ಪ್ರತ್ಯಕ್ಷ ಜನ್ಮಕೊಟ್ಟ ಮಾತೆಯನ್ನು ಮೃತ್ಯು

ವಿನ ಬಾಯಿಯಲ್ಲಿ ನೂಕಿ ಈಗ ಪ್ರೇಮದ ಸೋಗನ್ನೇ ಕಟ್ಟಿಕೊಳ್ಳುವಿಯಾ!" ಎಂದು ಸಂತಾಪದಿಂದ ನುಡಿದು ಅವಳನ್ನು ದೂರತಳ್ಳಿದನು. ಗಿರಿಜೆಯನ್ನು ಎಚ್ಚರಗೊಳಿಸುವುದಕ್ಕಾಗಿ ತಾನು ಮಾಡಿದ ಪ್ರಯತ್ನಗಳೆಲ್ಲವೂ ನಿಷ್ಫಲವಾದುದನ್ನು ನೋಡಿ ತಾರಾನಾಥನು "ಈಶ್ವರ ಕೃಪೆಯಿಂದ ವೈದ್ಯರಾದರೂ ತಮ್ಮ ಮನೆಯಲ್ಲಿದ್ದರೆ ಸಾಕಿತ್ತು" ಎಂದು ತನ್ನೊಳಗೆ ಗಟ್ಟಿಯಾಗಿ ಅಂದುಕೊಂಡು ಹೊರಗೆ ಹೋದನು.

೧೧

ಮಲ್ಲಿಕೆಯು ಮಾವನು ಮಾಡಿದ ಉಪಚಾರಗಳನ್ನೆಲ್ಲ ಪುನಃ ಮಾಡಿದಳು. ತನ್ನ ಪ್ರಯತ್ನವೆಲ್ಲವೂ ನಿಷ್ಫಲವಾದುದನ್ನು ನೋಡಿ ಗಟ್ಟಿಯಾಗಿ ಅಳಲಾರಂಭಿಸಿದಳು ಇಷ್ಟರಲ್ಲಿ ತಾರಾನಾಥನು ಡಾಕ್ಟರನನ್ನು ಕರೆದುಕೊಂಡು ಬಂದನು. ಡಾಕ್ಟರನಾದರೂ ಮನಃಪೂರ್ವಕವಾಗಿ ಜಾಗರೂಕತೆಯಿಂದ ಗಿರಿಜಾಬಾಯಿಯನ್ನು ಪರೀಕ್ಷೆಮಾಡಿದನು! ಎದೆಯನ್ನು ಪರೀಕ್ಷೆ ಮಾಡುವಾಗಲಂತೂ ಬಹಳ ಜಾಗರೂಕತೆಯಿಂದಿದ್ದನು 'ಸ್ಟೆತಸ್ಕೋಪಿನ ನಳಿಗೆಗೆ ಬೇಕಾದಷ್ಟು ತೂತುಗಳಿದ್ದುವು! ಸಾಧ್ಯಾಂಶವೇನೆಂದರೆ ರೋಗಿಗೂ, ಡಾಕ್ಟರನಿಗೂ ಸರಿಹೋಗಿತ್ತು. ಪರೀಕ್ಷೆಯು ಮುಗಿಯಿತು.

ಡಾಕ್ಟರನು ಚಿಂತಾಯುಕ್ತನಾಗಿ ತನ್ನ ಅಭಿಪ್ರಾಯವನ್ನು ವ್ಯಕ್ತಗೊಳಿಸಿದನು.

"ರೋಗಿಯು ಅಂತಃಕರಣದ ಮೇಲೆ ಏನೋ ಒಂದು ಭಯಂಕರ ಆಘಾತದ ಪರಿಣಾಮವಾದುದರಿಂದಲೇ ಅವಳು ಈ ಸ್ಥಿತಿಯಲ್ಲಿದ್ದಾಳೆ. ಯೋಗ್ಯವಾದ ಉಪಚಾರಗಳನ್ನು ಮಾಡಿದ್ದಲ್ಲಿ ಸ್ವಲ್ಪ ಹೊತ್ತಿನ ಮೇಲೆ ಇವಳು ಮೂರ್ಛೆಯಿಂದೇಳುವಳು ಆದರೆ ಅವಳಿಗೆ ಪುನಃ ಮೂರ್ಛಿತಾವಸ್ಥೆ ಬರುವ ಸಂಭವವಿದೆ. ಬಂದರೆ ಮಾತ್ರ ಬದುಕುವಂತಿಲ್ಲ. ಅವಳ ಆಶೆಯನ್ನು ನೀವು ಬಿಡಲೇಬೇಕಾದೀತು" ಎಂದು ಹೇಳಿ ವೈದ್ಯಕೀಯ ಉಪಚಾರಗಳಿಗೆ ಮೊದಲು ಮಾಡಿದನು. ಸಾಧಾರಣ ಮುಕ್ಕಾಲು ತಾಸಿನ ಬಳಿಕ ಗಿರಿಜೆಯು ಚಲಿಸಲಾರಂಭಿಸಿದಳು ಅದನ್ನು ನೋಡಿದ ತಾರಾನಾಥನಿಗೆ ಜೀವವು ತಿರುಗಿ ಬಂದಂತಾಯಿತು. ಅವನು ಸಮೀಪ ಹೋಗಿ 'ಅಕ್ಕಾ' ಎಂದು ಕರೆದನು. ಗಿರಿಜೆಯು ಕ್ಷೀಣಸ್ವರದಿಂದ ಉತ್ತರಕೊಟ್ಟಳು.

ಉಪವಾಸದಿಂದಲೇ ಅವಳ ಅವಸ್ಥೆಯು ಇಷ್ಟು ಹೀನ ಸ್ಥಿತಿಗೆ ಬಂದುದರಿಂದ ಅವಳು ಶೀಘ್ರವಾಗಿ ಅನ್ನಗ್ರಹಣ ಮಾಡುವುದು ಒಳ್ಳೆಯದೆಂದೂ, ಹಾಗಿಲ್ಲದಿದ್ದರೆ ಅವಳು ಪುನಃ ಮೂರ್ಛೆ ಹೊಂದುವಳೆಂದೂ, ಆದರಿಂದ ಭಯಂಕರ ಪರಿಣಾಮವಾದೀತೆಂದೂ ಸ್ಪಷ್ಟವಾಗಿ ಹೇಳಿ

ಡಾಕ್ಟರನು ಹೊರಟುಹೋದನು. ಕೂಡಲೆ ತಾರಾನಾಥನು ಊಟಮಾಡುವಂತೆ ಗಿರಿಜೆಗೆ ಬಹಳ ಆಗ್ರಹ ಮಾಡಿದನು. ಅದರಿಂದೇನೂ ಪ್ರಯೋಜನವಾಗಲಿಲ್ಲ. ಅವಳು ಸ್ಪಷ್ಟಸ್ವರದಿಂದ ತನ್ನ ನಿಶ್ಚಯವನ್ನು ಹೇಳಿ ತನ್ನ ಮಗಳ ವಿಚಾರವು ಹೇಗಿದೆಯೆಂದು ಆಲಿಸುತ್ತಾ ಮಲಗಿದಳು. ಸ್ವಲ್ಪ ಹೊತ್ತಿನ ಮೇಲೆ ಅವಳು ಪುನಃ ಮೂರ್ಛಿತಳಾಗುವ ಚಿಹ್ನೆಗಳು ಕಂಡುಬಂದುವು. ಕೂಡಲೆ ತಾರಾನಾಥನು ಗಟ್ಟಿಯಾಗಿ ರೋಧನಮಾಡಲು ಉಪಕ್ರಮಿಸಿ, ಮಲ್ಲಿಕೆಯ ಸಮೀಪ ಹೋಗಿ, ಅವಳ ಕಾಲಿನ ಮೇಲೆ ತಲೆಯಿಟ್ಟು "ಮಲ್ಲಿಕೆ! ಮಲ್ಲಿಕೆ! ಕಟ್ಟಕಡೆಗೆ ನಿನ್ನ ಹತ್ತಿರ ಬೇಡಿ ವಿನಂತಿಮಾಡಿಕೊಳ್ಳುತ್ತೇನೆ. ಇನ್ನಾದರೂ ನಿನ್ನ ನಿರ್ದಯತನವನ್ನು ಬಿಡು. ಅಕ್ಕನು ಪುನಃ ಮೂರ್ಛಿತಳಾಗುವಂತಿದೆ. ಒಮ್ಮೆ ಮೂರ್ಛಿತಳಾದರೆ ಅವಳು ಪುನಃ ಬದುಕುವ ಹಾಗಿಲ್ಲ. ಆ ಬಳಿಕ ನೀನು ನಿನ್ನ ಜನ್ಮಾಂತ್ಯದ ವರೆಗೆ ಅಳುತ್ತ ಕುಳಿತರೂ ನಿನ್ನ ತಾಯಿಯು ಪುನಃ ನಿನಗೆ ದೊರೆಯುವಳೆ? ನೋಡು! ಒಂದು ಕ್ಷಣವೂ ವಿಳಂಬಮಾಡಬೇಡ. ಅವಳಿಗೆ ಸಮಾಧಾನವಾಗುವಂತೆ ಈಗಲಾದರೂ ವರ್ತಿಸಿದ್ದಲ್ಲಿ ನಿನಗೆ ಅಮಂಗಲವಾಗಲಾರದು. ಅವಳನ್ನು ಸಮಾಧಾನಗೊಳಿಸು. ಈ ಸಲ ಅವಳು ಬದುಕುವುದೂ ಸಾಯುವುದೂ ನಿನ್ನ ಕೈಯಲ್ಲಿದೆ!" ಎಂದನು.

ಗಿರಿಜೆಗೆ ಬಂದ ಮೂರ್ಛೆ, ಡಾಕ್ಟರನ ಅಭಿಪ್ರಾಯ ಅದರ ಮೇಲೂ ತಿರುಗಿ ಅನ್ನಗ್ರಹಣ ಮಾಡಲಾರೆ ನೆಂಬ ಅವಳ ಶಪಥ, ಇವುಗಳಿಂದ ಕಳೆದ ಎರಡು ಮೂರು ತಿಂಗಳುಗಳಿಂದ ಕಿಂಚಿತ್ತಾದರೂ ಚಲಿಸದಿದ್ದ ಮಲ್ಲಿಕೆಯ ಧೃಡಸಂಕಲ್ಪವು ಈಗ ಎರಡುಮೂರು ತಾಸು ಗಳೊಳಗೆ ಚಂಚಲವಾಗಿತ್ತು. ಅಂದಮೇಲೆ ಪುನಃ ಗಿರಿಜೆಯ ಮೂರ್ಛೆಯ ಚೆಸ್ಟೆ, ತಾರಾನಾಥನು ಅಂಗ ಲಾಚಿ ಬೇಡಿದ ವಿನಂತಿ ಇವುಗಳಿಂದ ಅವಳು ಪೂರ್ಣ ಚಂಚಲಳಾಗಿದ್ದುದರಲ್ಲಿ ಆಶ್ಚರ್ಯವೇನು? ಮಾತೃ ಪ್ರೇಮದ ಅತಿಶಯವಾದ ಮೋಹಪಾಶಕ್ಕೆ ಬಲಿಬಿದ್ದು ತಾಯಿಯಿದ್ದೆಡೆಗೆ ಹೋದಳು; ಮತ್ತು ಅಳುತ್ತಾ ತನ್ನ ಮಾತೆಯನ್ನಾಲಂಗಿಸಿ, "ಅಮ್ಮಾ! ನಾನು ಏನು ಮಾಡಿ ದರೆ ನಿನಗೆ ಸಮಾಧಾನವಾದೀತೆಂದು ಹೇಳು. ಇನ್ನು ಮುಂದೆ ನಿನ್ನ ಆಜ್ಞೆಯನ್ನುಲ್ಲಂಘಿಸಿ ಒಂದು ಹೆಜ್ಜೆಯ ನ್ನಾದರೂ ಮುಂದಿಡಲಿಕ್ಕಿಲ್ಲ. ಇನ್ನಾದರೂ ನನ್ನ ಮೇ ಲಿನ ದ್ರೋಹವನ್ನು ಬಿಡು. ನೀನೀ ಲೋಕದಿಂದ ಹೋ ದರೆ ನನಗೆ ಯಾರ ಆಧಾರವೂ ಇಲ್ಲ!" ಎಂದು ಕರು ಣಾಪರಳಾಗಿ ನುಡಿದಳು. ತಾರಾನಾಥನೂ "ಅಕ್ಕಾ! ಮಲ್ಲಿಕೆಯು ಏನು ಹೇಳುತ್ತಾಳೆಂದು ಕೇಳು! ಎಷ್ಟೆಂ ದರೂ ಹೊಟ್ಟೆಯಲ್ಲಿ ಹುಟ್ಟಿದ ಮಗಳಲ್ಲವೇ? ಅವಳ ಪ್ರೇಮವು ನಿನ್ನಲ್ಲಿಲ್ಲವೆಂದು ಹೇಗೆ ಹೇಳಲಿಕ್ಕಾದೀತು?

ಇನ್ನು ಮುಂದಕ್ಕೆ ನಿನ್ನ ಮಾತಿನಂತೆ ನಡೆಯುವಳೆಂದು ಅವಳು ಹೇಳಿದ್ದಾಳಲ್ಲವೇ? ಅವಳನ್ನು ಉದ್ಧರಿಸು!" ಎಂದು ಗಾಂಭೀರ್ಯದಿಂದ ಹೇಳಿದನು

ಸ್ವಲ್ಪಹೊತ್ತಿನ ಮೇಲೆ ಗಿರಿಜೆಯು ತುಟುಕು ತುಟುಕಾಗಿ ಅಸ್ಫುಟ ಸ್ವರದಿಂದ "ನಾ . . ನು . . . ನಿಮಗೆ . . . ಕಲ . . . ವು . , . . ಹೊ . . ತ್ತಿನ . . . . ಮಾ . ತ್ರ . . . . ಸಂಗಾ . ತಿ . . . ಯು . . ಆದರೂ . . . . ನಾ . . ನು . . ಸಂತೋ . . . ಷ . . . ದಿಂದ . . . . ಸಾ . ಯ . . . ಬೇ . . ಕೆಂದು . . ಮ . . . ನ . . . ಸ್ಸಿ . . . ದ್ದಲ್ಲಿ . . ಆ . . . ಮ . . ನೋ . . . ಹರ . . . ನನ್ನು . . . ಇಲ್ಲಿ . . ಕರತಂದು . . . . ಮ . . ಲ್ಲಿ . . . ಕೆ . . ಯನ್ನು . . . ಅವ . . ನು . . . ಕ್ಕೈ . . . . ಹಿ . . ಡಿ . . ದು . . . ಪ್ರೀ . . ತಿ . . . ಸುವುದ . . . ನ್ನು . . . . ನೋ . . ಡ . . . ಬೇಕೆಂದು . . . . . ನನ್ನ . . . . ಆ . . . ಶೆ" ಎಂದಳು.

ತಾರಾನಾಥನು ಬೇಗ ಬೇಗನೆ ಕೋಟನ್ನು ಹಾಕಿಕೊಂಡು "ಅಕ್ಕಾ! ಇದೊ ನೋಡು. ಈಗಲೇ ಹೊರಟೆ ನಿನ್ನ ಮನಸ್ಸನ್ನು ನೋಯಿಸಬೇಕೆಂದು ನಮ್ಮಿಬ್ಬರ ಇಚ್ಛೆಯು ಇಲ್ಲ. ನಿನ್ನ ಪ್ರಾಣದ ವಿಷಯವಾಗಿ ಮಾತ್ರ

ಇಂತಹ ಅಶುಭವಾಣಿಗಳನ್ನು ನುಡಿಯಬೇಡ. ನೀನು ಈಶ್ವರ ಕೃಪೆಯಿಂದ ನಿನ್ನ ಮಗಳು ಸುಖವನ್ನನುಭವಿಸುವುದನ್ನು ನೋಡಲು ಬದುಕುವಿ” ಎಂದು ಹೇಳಿ ಹೊರಟುಹೋದನು.

ದುರ್ದೈವಿಂಶಾದ ಮಲ್ಲಿಕೆ! ತಾರಾನಾಥನು ಹೊರಗೆ ಹೋದ ಕೂಡಲೇ ಆ ದೀನ ಹಸುವು ದುಃಖದಿಂದ ಒಂದೇಸವನೆ ಆಕ್ರಂದನ ಮಾಡತೊಡಗಿತು. ಸ್ವಲ್ಪ ಸಮಯದಲ್ಲಿಯೇ ತನ್ನ ಮೇಲೆ ಬರಲಿರುವ ಕಠಿಣ ಪ್ರಸಂಗವು ಯಾವ ರೀತಿಯದ್ದೆಂದು ಅವಳು ಅರಿತಿದ್ದಳು. ಆದರೆ ಅದರ ಕೂಡೆ ಎದೆಗುಂದದೆ ಧೈರ್ಯದಿಂದ ಇರಲು ಅವಳಿಗೆ ಸಾಧ್ಯವಿರಲಿಲ್ಲ.

ಅರ್ಧ ಘಂಟೆಯೊಳಗೆ ತಾರಾನಾಥನು ಮನೋಹರನನ್ನು ಕರಕೊಂಡು ಬಂದನು. ಇದುವರೆಗೂ ಮಲ್ಲಿಕೆಯು ತನ್ನ ಜೀವನದ ಸಂಬಂಧವಾಗಿ ಮನಸ್ಸಿನಲ್ಲಿ ಕಲ್ಪಿಸಿದ ಪವಿತ್ರವಾಗಿಯೂ, ಸುಖವಾಗಿಯೂ ಇದ್ದ ಸ್ವಪ್ನಗಳು ಇಂದು ಸ್ವಪ್ನಗಳೇ ಆಗಿ ಅಂತರ್ಧಾನವಾದುವು. ಸಾಧ್ವಿಯೂ, ನಿಷ್ಕಳಂಕಳಾಗಿಯೂ ಇದ್ದ ಆ ದೀನ ಧೇನುವಿಗೆ ಇವರಿಬ್ಬರೂ ಆ ದಿನ ವೇಶ್ಯಾವೃತ್ತಿಯ ಪಾಪಕರ್ಮದಲ್ಲಿ ಬಲಾತ್ಕಾರದಿಂದ ನೂಕಿದರು. ತಮ್ಮ ಪ್ರಯತ್ನಗಳಾದರೂ ಸಫಲವಾದುದಕ್ಕಾಗಿ ಶ್ರೀಮಹಾಲಿಂಗೇಶ್ವರನಿಗೆ ಗಿರಿಜೆಯೂ, ತಾರಾ

ನಾಥನೂ ಸಹಸ್ರ ಪ್ರಣಾಮಗಳನ್ನು ಮಾಡಲಿಕ್ಕೆ ಮರೆಯಲಿಲ್ಲ!

೧೨

ಮನುಷ್ಯನು ಸಹಜವಾಗಿ ಸುಖಾಪೇಕ್ಷಿಯೆಂದು ಹೇಳುವರು. ಆದರೆ ಮಲ್ಲಿಕೆಯ ಸ್ವಭಾವವು ಹೀಗಿರಲಿಲ್ಲ. "ನನ್ನ ಜನ್ಮವು ಕಲಂಕಿತವಾಯಿತು ನಾನು ಮನಃಪೂರ್ವಕವಾಗಿ ಸಂಗ್ರಹಿಸಿಟ್ಟದ್ದ ನನ್ನ ಶ್ರೇಷ್ಠವಾದ ಜೀವನವು ಇಂದು ಮಣ್ಣುಗೂಡಿತು. ಇನ್ನು ಮುಂದೆ ಸುಖದ ನೆರಳಾದರೂ ನನ್ನಲ್ಲಿ ಬೀಳಲಿಕ್ಕಿಲ್ಲ. ದುಃಖದಿಂದ ಕೊರಗಿ ಮೃತ್ಯುವಿನ ಮಾರ್ಗ ನಿರೀಕ್ಷಿಸುವುದರ ಹೊರತು ನನಗಿನ್ನಾವ ಸುಖವೂ ಇಲ್ಲ" ಎಂಬೀ ಭಾವನೆಯು ಅವಳ ಅಂತರಂಗದಲ್ಲಿ ನೆಲೆಗೊಂಡಿತು. ಹೀಗೆ ಮಲ್ಲಿಕೆಯು ತನ್ನ ಸಮಯವನ್ನೆಲ್ಲ ಚಿಂತೆಯಿಂದ ಕಳೆಯುತ್ತಿದ್ದಳು. ಆದರೆ ಶೋಕಕ್ಕೂ ಅಂತ್ಯವಿದೆಯಲ್ಲವೆ? ಮೊದಲು ಕೆಲವು ದಿನಗಳು ಕಳೆದ ಬಳಿಕ ಅವಳ ಮನಸ್ಸಿನಲ್ಲಿ "ಒಂದು ರೀತಿಯಿಂದ ನಾನು ಪತಿತಳಾದರೂ ಸದಾಚಾರದಿಂದ ನಡೆಯಲು ಪ್ರಯತ್ನಿಸಿ ಅದರಿಂದ ಸುಖವನ್ನು ಪಡೆಯುವುದು ಅಸಾಧ್ಯವಲ್ಲ. ಪವಿತ್ರವಾದ ರೀತಿಯಿಂದ ವಿವಾಹವಾಗುವುದು ನನ್ನ ಅದೃಷ್ಟದಲ್ಲಿಲ್ಲ. ಆದರೂ ಯಾವ ಪುರುಷನಿಗೆ ನನ್ನ ದೇಹವನ್ನು ವಿಕ್ರಯಿಸಬೇಕೆಂದು

ಈಶ್ವರನು ಸಂಕಲ್ಪಮಾಡಿದ್ದನೋ, ಅವರ ಚರಣಗಳ ಲ್ಲಿಯೇ ನನ್ನ ಮನಸ್ಸನ್ನು ಧೃಡವಾಗಿರಿಸುವಂತೆ ಮಾಡಿ ಅವರೊಡನೆ ಜನ್ಮಾಂತ್ಯದ ವರೆಗೆ ಸದಾಚಾರದಿಂದ ಧರ್ಮಪತ್ನಿಯಂತೆ ಏತಕ್ಕೆ ವರ್ತಿಸಬಾರದು? ಲೌಕಿಕ ದೃಷ್ಟಿಯಿಂದಲ್ಲದಿದ್ದರೂ, ತಾತ್ವಿಕ ದೃಷ್ಟಿಯಿಂದಲಾ ದರೂ ನನ್ನ ಜೀವಿತದ ಹೇತುವನ್ನು ಸಾಧ್ಯಗೊಳಿಸಿದರೆ ನನಗೆ ಸಾತ್ವಿಕ ಸುಖವು ಲಭಿಸುವದು" ಎಂಬ ವಿಚಾರವು ಪ್ರಕಾಶವಾಗಲಾರಂಭಿಸಿತು.

ಸ್ವಲ್ಪ ಕಾಲದಲ್ಲಿಯೇ ಅವಳ ವಿಚಾರವು ಎಷ್ಟು ಧೃಡವಾಯಿತೆಂದರೆ ಅವಳು ಅದೇ ರೀತಿ ನಡೆಯಲಾ ರಂಭಿಸಿದಳು. ಆದರ್ಶ ಕುಲಸ್ತ್ರೀಯಳಂತೆ ಪ್ರೇಮ ಭರಿತಳೂ, ನಿಷ್ಠಾವಂತಳೂ ಆಗಿ ಮನೋಹರನನ್ನು ಕಾಣಲಾರಂಭಿಸಿದಳು ಗಿರಿಜೆಗೂ, ತಾರಾನಾಥನಿಗೂ, ಮನೋಹರನಿಗೂ ಇದರಿಂದ ಬಹಳ ಆನಂದವಾಯಿತು. ಇದು ಸಹಜವೇ ಸರಿ. ಆದರೆ ಅಲ್ಪ ಸಂತೋಷದಿಂದ ಸೌಖ್ಯಚಿತ್ತಳಾಗಿ ಮನೋಹರನೊಡನಿರಲು ಗಿರಿಜೆಯೂ ತಾರನಾಥನೂ ಅವಳನ್ನು ಬಿಡಲಿಲ್ಲ. ಮನೋಹರ ನೊಡನೆ ಬಹಳ ಉಲ್ಲಾಸದಿಂದಲೂ, ಪ್ರೀತಿಯಿಂದ ಲೂ ಮಲ್ಲಿಕೆಯು ವರ್ತಿಸುವುದನ್ನು ನೋಡಿ ಅವಳ ಮೊದಲಿನ ಎಲ್ಲಾ ವಿಚಾರಗಳು ಮಾಯವಾಗಿರಬಹು ದೆಂದು ಇವರಿಬ್ಬರೂ ತಿಳಕೊಂಡರು ವೇಶ್ಯಾವೃತ್ತಿಗೆ

ಅವಳು ಪ್ರವೇಶಿಸಿ ಬಹಳ ದಿನಗಳಾದರೂ ಅದರಲ್ಲಿಯ ಮುಖ್ಯ ಕರ್ತವ್ಯವಾದ ದ್ರವ್ಯಸಂಗ್ರಹಿಸುವ ಕಲೆಯನ್ನು ಅವರು ಅವಳಿಗೆ ಇನ್ನೂ ಕಲಿಸಿಕೊಟ್ಟಿರಲಿಲ್ಲ. ಆ ಪಾಠವನ್ನು ಅವಳಿಗೆ ಕಲಿಸಲು ಈಗ ಏನೂ ಅಡ್ಡಿ ಇರಲಿಕ್ಕಿಲ್ಲವೆಂದು, ಅವಳ ವರ್ತನೆಯಿಂದ ತಿಳುಕೊಂಡರು. ಗತಕಾಲದ ತನ್ನ ಉಚ್ಚವಾದ ಮನೋರಥವು ಭಗ್ನವಾಗಿ, ಬದಲಾಗಿ ದುಃಖದ ಆಘಾತವಾದರೂ ಸಹಿಸಿಕೊಂಡು, ಮನೋಹರನ ಮೇಲೆ ನಿರಾಪೇಕ್ಷೆಯಿಂದ ಪ್ರೀತಿಸುತ್ತಿದ್ದ ಮಲ್ಲಿಕೆಗೆ ಪುನಃ ದುಃಖತರಂಗಗಳು ತಲೆದೋರಲಾರಂಭಿಸಿದುವು

ತಾರಾನಾಥನು ಇಷ್ಟು ಸಮಯವನ್ನು ವೃಥಾ ಹರಣಮಾಡಲಿಲ್ಲ. ನಾನಾತರದ ಯುಕ್ತಿ ಕುಯುಕ್ತಿಗಳನ್ನು ಮಾಡಿ, ಮನೋಹರನ ಮೂಲಕ ದ್ರವ್ಯವನ್ನು ಅಪಹರಿಸುವ ಸಿದ್ಧತೆಯನ್ನು ಮಾಡಿಕೊಂಡಿದ್ದನು. ಮನೋಹರನ ಚಿಕ್ಕಪ್ಪನು ಕಡು ಲೋಭಿಯೂ, ವ್ಯವಹಾರ ಚತುರನೂ ಆಗಿದ್ದುದರಿಂದ ರಖಂ ಹಣದಲ್ಲಿ ಒಂದೇ ಒಂದು ಬಿಡಿಕಾಸಾದರೂ ಇವನ ಕೈಗೆ ಸಿಗುವ ಹಾಗೆ ಇದ್ದಿಲ್ಲ. ಆದರೆ ಮನೋಹರನ ಪತ್ನಿಯ ಮೈಮೇಲೆ ಸಾಧಾರಣ ಇಪ್ಪತ್ತು ಇಪ್ಪತ್ತೈದು ಸಾವಿರ ರೂಪಾಯಿ ಬೆಲೆಯಾಗುವ ಆಭರಣಗಳಿದ್ದುವು. ಆ ಗೃಹಿಣಿಯು ಬಹಳ ಸಾಧ್ವಿಯೂ, ಪತಿವ್ರತೆಯೂ ಆಗಿ

ದ್ದಳು ಪತಿಯು ಯಾವುದೊಂದು ಇಚ್ಛೆಯನ್ನಾದರೂ, ಅವನು ಬಾಯಿಯಿಂದ ಹೇಳುವುದೊಂದೇ ತಡ, ಕ್ಷಣವೂ ವಿಳಂಬಮಾಡದೆ ಅವಳು ನಡೆಸುತ್ತಿದ್ದಳು. ಈ ಸಂಗತಿಯನ್ನು ಧೂರ್ತನಾದ ತಾರಾನಾಥನು ವಿಚಾರಿಸಿ ತಿಳುಕೊಂಡಿದ್ದನು

ಕ್ರಮೇಣ ಮನೋಹರನ ಕೂಡೆ ಸರಸಸಲ್ಲಾಪಗಳನ್ನಾಡಿ ಆ ಆಭರಣಗಳನ್ನು ಹೇಗೆ ಅಪಹರಿಸಬೇಕು ಎಂಬ ವಿಷಯದಲ್ಲಿ ಗಿರಿಜೆಯು ಮಲ್ಲಿಕೆಗೆ ಪಾಠಗಳನ್ನು ಕೊಡಲಾರಂಭಿಸಿದಳು ಆದರೆ ತನ್ನ ತಾಯಿಯ ಮಾತಿನಂತೆ ನಡೆದು, ಮನೋಹರನ ಮೇಲೆ ತನಗಿದ್ದ ಪವಿತ್ರವಾದ ಪ್ರೇಮಕ್ಕೆ ವಿಕ್ರಯದ ಅಮಂಗಲ ಸ್ವರೂಪವನ್ನು ತರಬೇಕೆಂಬ ಕಲ್ಪನೆಯನ್ನು ಮಲ್ಲಿಕೆಯು ಸಹಿಸಲಾರದೆ ಹೋದಳು. "ಒಂದು ಸಲ ಗಾಳಕ್ಕೆ ಸಿಲುಕಿದೆನಾದರೂ ಬಹಳ ಆಳದ ವರೆಗೆ ಹೋಗಲಾರೆ" ಎಂದವಳು ನಿಶ್ಚಯಿಸಿದಳು. ಮಾತ್ರವಲ್ಲ ಬಹಳ ದಿವಸಗಳ ವರೆಗೆ ಅದನ್ನು ಪಾಲಿಸಿಕೊಂಡು ಬಂದಳು

ಆದರೆ ಗಿರಿಜೆಯು ಪುನಃ ತನ್ನ ಅಸ್ತ್ರವನ್ನು ಪ್ರಯೋಗಿಸಿದಳು. ಪ್ರತಿದಿನವೂ ರೇಗುವುದು, ಅಳುವುದು, ಅನ್ನತ್ಯಾಗ ಇವೇ ಮೊದಲಾದ ಹಿಂದಿನ ನಿತ್ಯಕರ್ಮಗಳನ್ನು ಮೊದಲು ಮಾಡಿದಳು. ಇದರಿಂದ ಸಾಧ್ವಿ

ಯೂ, ಪ್ರೇಮಭರಿತಳೂ ಆದ ಮಲ್ಲಿಕೆಗೆ ಬಹಳ ಪಶ್ಚಾತ್ತಾಪವಾಯಿತು. ಮೆಲ್ಲಮೆಲ್ಲನೆ ಅವಳ ನಿಶ್ಚಯವು ಕಡಿಮೆಯಾಗುತ್ತ ಬಂತು. ಕೊನೆಗೆ ತನ್ನ ತಾಯಿಯನ್ನು ಸಮಾಧಾನ ಪಡಿಸುವುದಕ್ಕೋಸುಗ ತನ್ನ ಮನೋಹರ ನೊಡನೆ ಆಭರಣಗಳ ಇಚ್ಛೆಯನ್ನು ಹೇಳಿದಳು. ಒಂದರ ಹಿಂದೆ ಇನ್ನೊಂದಾಗಿ ಆಭರಣಗಳು ಬರಲಾರಂಭಿಸಿ ದುವು. ಹೆಚ್ಚೇಕೆ? ಹತ್ತು ಹದಿನೈದು ದಿನಗಳೊಳಗಾಗಿ ಮಲ್ಲಿಕೆಯು ಸಂಪೂರ್ಣ ಆಭರಣಭರಿತಳಾಗಿದ್ದುದನ್ನು ನೋಡಿ ಗಿರಿಜೆಯೂ ತಾರಾನಾಥನೂ ಸುಖಸಾಗರ ದಲ್ಲಿಯೇ ತೇಲಾಡಿದರು. ಮಲ್ಲಿಕೆಗೆ ಮಾತ್ರ ಈ ಆಭರಣಗಳು ಮನಸ್ಸಿಗೆ ಏನೂ ಸುಖಕೊಡಲಾ ರದೆ ಹೋದುವು. ಬದಲಾಗಿ, ವೇಶ್ಯಾವೃತ್ತಿಯೆಂಬ ಹೇಸುಗೆಯ ಗುಂಡಿಯಲ್ಲಿ ದುರ್ದೈವವು ತನ್ನನ್ನು ಇನ್ನೂ ಇನ್ನೂ ಮುಣುಗಿಸಿ ಬಿಡುತ್ತದೊ ಎಂಬ ಭಯವು ಅವಳನ್ನು ಆವರಿಸಿಕೊಂಡಿತು ಇದರಿಂದ ಅವಳ ಮನೋದೇವತೆಯು ದುಃಖವನ್ನಲ್ಲದೆ ಸುಖದ ಒಂದು ಕ್ಷಣವನ್ನಾದರೂ ಅವಳಿಗೆ ಕೊಡದೆ ಹೋ ದಳು.

ಇದೇ ರೀತಿಯಲ್ಲಿ ಆರು ತಿಂಗಳುಗಳು ಕಳೆದು ಹೋದುವು. ಈ ಅವಧಿಯೊಳಗೆ ಸಾಧಾರಣ ಹದಿ ನೈದು ಇಪ್ಪತ್ತುಸಾವಿರ ರೂಪಾಯಿಯ ಆಭರಣಗಳು

ಗಿರಿಜೆಯು ಕೈಸೇರಿದುವು. ಆದರೆ ಅಷ್ಟರಲ್ಲೇ ಗಿರಿಜೆಗೆ ಹೇಗೆ ತೃಪ್ತಿಯಾದೀತು?

ಒಂದು ದಿನ ತಾರಾನಾಥನು ಇಂದಿನವರೆಗೆ ನೊರೆತ ಎಲ್ಲಾ ಆಭರಣಗಳಿಗಿಂತಲೂ ಹೆಚ್ಚಿನ ಬೆಲೆಬಾಳುವ ಆಭರಣವೊಂದು ಮನೋಹರನ ಪತಿಯವಶದಲ್ಲಿದೆ ಎಂಬುದೊಂದು ಹೊಸ ಸಮಾಚಾರವನ್ನು ತಂದನು ಈ ಆಭರಣವನ್ನು ಮನೋಹರನ ತಂದೆಯು ತನ್ನ ಅವಸಾನ ಕಾಲದಲ್ಲಿ ಪ್ರೀತಿಯ ಕಾಣಿಕೆಯೆಂದು ತನ್ನ ಸೊಸೆಗೆ ಕೊಟ್ಟಿದ್ದನು. ಅವಳು ಅದಕ್ಕೇನೆ ತನ್ನ ಮಂಗಲ ಸೂತ್ರವನ್ನು ಕಟ್ಟಿ ಕುತ್ತಿಗೆಯಲ್ಲಿ ಧರಿಸಿಕೊಂಡಿದ್ದಳು. ಅದರಲ್ಲಿದ್ದ ಪ್ರತಿಯೊಂದು ಮಾಲೆಯೂ ಒಳ್ಳೆ ಬೆಲೆಯುಳ್ಳ ಮುತ್ತಿನಿಂದ ಕಟ್ಟಿದ್ದುದರಿಂದ ಅದು ಸಾಧಾರಣ ಹತ್ತು ಹದಿನೈದು ಸಾವಿರ ರೂಪಾಯಿ ಬೆಲೆಬಾಳುತ್ತಿತ್ತು. ಇದನ್ನು ಕೇಳಿ ಗಿರಿಜೆಯ ಬಾಯಿಯಲ್ಲಿ ನೀರು ಬಂತು ಮರುದಿನದಿಂದಲೇ ಮನೋಹರನೊಡನೆ ಆ ಮಂಗಲ ಸೂತ್ರಕ್ಕೋಸ್ಕರ ಚಂಡಿಹಿಡಿಯಲು ಮಲ್ಲಿಕೆಗೆ ಅಪ್ಪಣೆಯಾಯಿತು. ಮಲ್ಲಿಕೆಯು ಪ್ರಥಮದಲ್ಲಿ ಈ ಅಪ್ಪಣೆಯನ್ನು ಉಲ್ಲಂಘಿಸಿದಳು. ಸುವಾಸಿನಿಯರಾದ ಕುಲಸ್ತ್ರೀಯರು ಮಂಗಲ ಸೂತ್ರವನ್ನು ತಮ್ಮ ಪ್ರಾಣಕ್ಕಿಂತ ಅಧಿಕವಾಗಿ ಕಾಯುವರೆಂದೂ ಅದನ್ನು ಅಪಹರಿಸಿದಲ್ಲಿ ಎಂಥ ವಿಪರೀತವಾದ ದುಃಖವು

ಅವರಲ್ಲಿ ಉಂಟಾಗುವುದೆಂದೂ ಅವಳಿಗೆ ಚೆನ್ನಾಗಿ ಗೊತ್ತಿತ್ತು. ಆದುದರಿಂದ ಗ್ರಹಣಿಯೊಬ್ಬಳ ಮನಸ್ಸನ್ನು ಇಷ್ಟು ಘೋರವಾದ ರೀತಿಯಿಂದ ನೋಯಿಸುವಷ್ಟು ಪಾಷಾಣ ಹೃದಯವು ಅವಳಲ್ಲಿರಲಿಲ್ಲ. ಅವಳು ಅದಕ್ಕೋಸ್ಕರ ತಾಯಿಯೊಡನೆ ಬಿಡದೆ ಹದಿನೈದು ದಿನಗಳವರೆಗೆ ಜಗಳಾಡಿದಳು. ಆದರೆ ಕಡೆಗೆ ಗಿರಿಜೆಯು ಆತ್ಮಹತ್ಯೆಯನ್ನು ಮಾಡಿಕೊಳ್ಳುವ ಸೋಗನ್ನು ಮುಂದೆ ಮಾಡಿ ಮಲ್ಲಿಕೆಯನ್ನು ಭಯಪಡಿಸಿದಳು. ಮಾತೃಪ್ರೇಮಕ್ಕೆ ಬಲಿಯಾದ ಮಲ್ಲಿಕೆಯ ಅಂತರಂಗವು ದುರ್ಬಲವಾಯಿತು. ಮೂರು ನಾಲ್ಕು ದಿನ ಅನ್ನ ಗ್ರಹಣಮಾಡದೆ ಗಿರಿಜೆಗೆ ಬಂದ ಮೂರ್ಛೆ, ತಾರಾನಾಥನು ಅದನ್ನು ನೋಡಿ ಮಾಡಿದ ಹೃದಯದ್ರಾವಕವಾದ ರೋದನ, ಅಂದು ಬಂದಿದ್ದ ಡಾಕ್ಟರನೇ ಪುನಃ ಬಂದು ಪರೀಕ್ಷಿಸಿ ಹೇಳಿದ ಅತ್ಯಂತ ಚಿಂತಾಯುಕ್ತವಾದ ಅಭಿಪ್ರಾಯ ಇವೇ ಮೊದಲಾದ ವಿಷಯಗಳಿಂದಲೂ, ತಾರಾನಾಥನು ಮೃತ್ಯುವಿನ ಬಾಯಿಯಲ್ಲಿದ್ದ ಗಿರಿಜೆಯನ್ನು ಬಿಡಿಸಲು ಅದೊಂದೇ ಉಪಾಯವಿದೆಯೆಂದು ವಿನಯದಿಂದ ಮಾಡಿದ ಪ್ರಾರ್ಥನೆಯಿಂದಲೂ ಮಲ್ಲಿಕೆಯು ನಿರುಪಾಯಳಾಗಿ, ತಾಯಿಯ ಆಜ್ಞೆಗೆ ವಿರೋಧವಾಗಿ ನಡೆಯುವುದಿಲ್ಲವೆಂದು ಶ್ರೀ ಮಹಾಲಿಂಗೇಶ್ವರನ ಸಾಕ್ಷಿಯಾಗಿ ಶಪತಕೊಟ್ಟು ಹೇಳಿ

ದಳು. ಆ ಮೇಲೆ ಗಿರಿಜೆಯು ಮೆಲ್ಲನೆದ್ದು ಊಟವಮಾಡಿದಳು.

## ೧೩

ಮರುದಿನ ಸಾಧಾರಣ ರಾತ್ರಿ ಒಂಭತ್ತುಘಂಟೆಯಾಗಿರಬಹುದು. ಮಲ್ಲಿಕೆಯು ತನ್ನ ಕೋಣೆಯೊಳಗೆ ಒಬ್ಬಳೇ ಕುಳಿತು ಕಣ್ಣಿನಿಂದ ಒಂದೇ ಸಮನೆ ನೀರು ಸುರಿಸುತ್ತಿದ್ದಳು. ಸ್ವಲ್ಪ ಹೊತ್ತಿನ ಮೊದಲು ಅವಳಿಂದ ಏನೊ ಒಂದು ನೀಚ ಕೃತ್ಯವು ನಡೆದಿರಬೇಕೆಂದೂ ಇದರಿಂದ ಅವಳ ಅಂತಃಕರಣಕ್ಕೆ ವಿಶೇಷ ವ್ಯಥೆಯಾಗಿರಬೇಕೆಂದೂ ಅವಳ ಮುಖಮುದ್ರೆಯಿಂದ ತಿಳಿದುಬರುತ್ತಿತ್ತು. ಅರ್ಧ ಘಂಟೆಯ ಮೊದಲು ಎಂದಿನಂತ ಮನೋಹರನು ಮಲ್ಲಿಕ ಇದ್ದಲ್ಲಿಗೆ ಬಂದಿದ್ದನು. ಅವನೊಡನೆ ಆ ಮಲ್ಲಿಕೆಯು ಆ ಮುತ್ತಿನ ಮಂಗಲಸೂತ್ರದ ಸಮಾಚಾರವನ್ನು ಕೇಳಿ "ಈಗಲೇ ಅದನ್ನು ತಂದುಕೊಡಬೇಕು" ಎಂದು ಚಂಡಿಹಿಡಿದಿದ್ದಳು ಇದರ ಹಿಂದೆ ಅವಳು ಅನೇಕಾನೇಕ ಆಭರಣಗಳನ್ನು ಅವನಿಂದ ಪಡೆದಿದ್ದಳಾದರೂ ಈ ಹೊತ್ತಿನಷ್ಟು ದುರಾಗ್ರಹವನ್ನು ಅವಳೆಂದಿಗೂ ಹಿಡಿದಿದ್ದಿರಲಿಲ್ಲ. ಮನೋಹರನಾದರೂ ಇಂದಿನ ವರೆಗೆ ತನ್ನ ವಿಷಯದಲ್ಲಿ ಸದ್ಧರ್ಮದಲ್ಲಿದ್ದು, ತನ್ನನ್ನು ಮನಃಪೂರ್ವಕವಾಗಿ ಪ್ರೀತಿಸುತ್ತಿದ್ದ ಮಲ್ಲಿಕಯು ಈಹೊತ್ತು ಥಕ್ಕನೆ ಇಂತಹ ವರ್ತನೆಯನ್ನು ಮಾ

ಡಲು ಕಾರಣವೇನೆಂದು ತಿಳಿಯದೆ ಆಶ್ಚರ್ಯಚಕಿತನಾದನು. ತನ್ನ ಪತ್ನಿಯು ಸೌಭಾಗ್ಯ ಚಿಹ್ನೆಯಾಗಿದ್ದ ಆ ಆಭರಣವನ್ನವಳು ಎಷ್ಟು ಆದರದಿಂದ ಧರಿಸಿಕೊಂಡಿರುವಳೆಂದು ಅವನಿಗೆ ಗೊತ್ತಿತ್ತು. ಈ ವರೆಗೆ ಅದು ಅವಳ ಕುತ್ತಿಗೆಯಿಂದ ಅಗಲಿರಲಿಲ್ಲವೆಂದೂ, ಮಾತ್ರವಲ್ಲ, ಅವಳು ಈಗ ಕಾಹಿಲೆಯಿಂದ ಮೃತ್ಯುಶಯ್ಯೆಯಲ್ಲಿರುವಳೆಂದೂ ಅವನು ಮಲ್ಲಿಕೆಗೆ ಬಹಳ ಕರುಣಾಸ್ವರದಿಂದ ತಿಳಿಸಿದ್ದನು. ಆದರೆ ಮಲ್ಲಿಕೆಯು ತಾಯಿಗೆ ಕೊಟ್ಟ ಮಾತನ್ನು ಪಾಲಿಸುವುದಕ್ಕೋಸ್ಕರ ರಾಕ್ಷಸಿಯಂತೆ ನಟಿಸಿ ತನ್ನ ಹಟವನ್ನೇ ಹಿಡಿದಿದ್ದಳು.

ಕೊನೆಗೆ ಒಂದು ತಾಸಿನೊಳಗಾಗಿ ಆ ಆಭರಣವನ್ನು ಪ್ರಯತ್ನಮಾಡಿ ತೆಗೆದುಕೊಂಡು ಬರುತ್ತೇನೆಂದು ಹೇಳಿ ಮನೋಹರನು ಹೊರಟುಹೋಗಿದ್ದನು. ತನ್ನ ಪತ್ನಿಯ ಪ್ರೀತಿಯ ಸೌಭಾಗ್ಯಚಿಹ್ನೆಯನ್ನು ತಾನು ಅಪಹರಿಸಿದರೆ ಮರಣೋನ್ಮುಖಳಾಗಿದ್ದ ಅವಳ ಹೃದಯಕ್ಕೆ ಸಿಡಿಲು ಬಡಿದಂತಾಗಿ ಅವಳು ಕೂಡಲೇ ಪ್ರಾಣವನ್ನು ಬಿಡಲಿಕ್ಕೆ ಸಾಕು ಎಂದು ಅವನಿಗೆ ತಿಳಿಯದೆ ಇದ್ದಿಲ್ಲ! ಆದರೂ ಮಲ್ಲಿಕೆಯ ಅಪ್ರತಿಮ ಸೌಂದರ್ಯಕ್ಕೆ ಮೆಚ್ಚಿ ಕಳೆದ ಆರು ತಿಂಗಳುಗಳಿಂದಲೂ ಅವಳ ಇಚ್ಛೆಗಳನ್ನು ಪೂರೈಸುತಿದ್ದ ಮನೋಹರನು ಇಂದು ಇಂತಹ ಹೇಯ ಕಾರ್ಯಕ್ಕೂ ಸಿದ್ಧನಾದನು ಎಂದರೆ ಅತಿಶಯೋಕ್ತಿ

ಯಾಗಲಾರದು. ದಿನಕ್ಕೊಂದಾವರ್ತಿ ಅವಳನ್ನುನೋಡಿ ಮಾತುಕಥೆಗಳನ್ನಾಡದಿದ್ದರೆ ಅವನಿಗೆ ಊಟವೇ ರುಚಿ ಸುತ್ತಿದ್ದಿಲ್ಲ! ನಿದ್ದೆ ಹತ್ತುತ್ತಿದ್ದಿಲ್ಲ! ಇನ್ನೇನು? ಅವಳಿಗೋಸ್ಕರ ಯಾವ ಘೋರಕೃತ್ಯವನ್ನು ಮಾಡಲಿಕ್ಕೂ ಅವನು ಹೇಸುತ್ತಿದ್ದಿಲ್ಲ!

ಮಲ್ಲಿಕೆಯು ಕಣ್ಣುಗಳಿಂದ ನೀರು ಇನ್ನೂ ಒಂದೇ ಸವನೆ ಬರುತ್ತಲಿದ್ದಿತು. "ನಿನ್ನೆ ದಿನ ನಡೆದ ಪ್ರಸಂಗದಿಂದ ನನ್ನ ದುಃಸ್ಥಿತಿಗೆ ಒಳ್ಳೆ ಸಮಯ ಬಂದೊದಗಿತು. ಆಯುಷ್ಯಕ್ಕೆ ಒಂದು ತರದ ಒಳ್ಳೆಯ ಮಾರ್ಗವನ್ನು ತೋರಿಸಬೇಕೆಂಬ ಇಚ್ಛೆಯು ಇಂದಿನ ವರೆಗೂ ಕೊನೆಗಾಣಲಿಲ್ಲ! ಆ ಇಚ್ಛೆಯನ್ನೇ ಮನಸ್ಸಿನಿಂದ ಹೊರತಳ್ಳುವ ಕಾಲವು ಬಂತು. ನನಗೆ ಈಗ ಸ್ವತಂತ್ರ ವಿಚಾರಶಕ್ತಿ, ಆಯುಷ್ಯದಲ್ಲಿನ ಪವಿತ್ರವಾದ ಸುಖಸಂಬಂಧದ ಹೇತುಗಳು ಎಲ್ಲವೂ ಅಳಿದುಹೋದುವು. ಇನ್ನು ತಾಯಿಯ ಮತ್ತು ಮಾವನ ದುಷ್ಟವಾಸನೆಗಳನ್ನು ತೃಪ್ತಿಮಾಡುವುದಕ್ಕೋಸ್ಕರವೇ ನಾನು ಜೀವದಿಂದಿದ್ದು ನಿರ್ಜೀವವಾದ ಬೊಂಬೆಯಂತೆ ಕುಣಿಯುತ್ತಿರುವೆನು ಅವರಾದರೂ ಈ ಬೊಂಬೆಯಿಂದ ಸುಖವನ್ನು ಅನುಭವಿಸಲಿ!" ಇವೇ ಮೊದಲಾದ ಅನೇಕ ಕಲ್ಪನೆಗಳು ಮಲ್ಲಿಕೆಗೆ ಹೊಳೆದುದರಿಂದ ಅವಳು ಮನೋಹರನೊಡನೆ ಇಂತಹ ಕಠೋರ ವರ್ತನೆಯನ್ನು ಮಾಡಿದ್ದಳು. ಆದರೆ

ಅವನು ಹೊರಟು ಹೋದ ಮೇಲೆ ಅವನಲ್ಲಿ ಆರು ತಿಂಗಳ ಹಿಂದೆ ಇದ್ದ ಪ್ರೇಮ, ಈಗ ಅದಕ್ಕೆ ಬಂದಿರುವ ಭಯಂಕರ ಸ್ವರೂಪದ ಬದಲಾವಣೆ, ಈ ಎರಡು ಚಿತ್ರಗಳು ಅವಳ ಕಣ್ಣ ಮುಂದೆ ನಿಂತುಬಿಟ್ಟವು. ಇದರಿಂದ ಪಶ್ಚಾತ್ತಾಪವೂ, ಶೋಕವೂ, ಏಕಕಾಲದಲ್ಲಿ ಅವಳ ಹೃದಯವನ್ನು ತುಂಬಿಕೊಂಡು ಅಶ್ರುಧಾರೆಯಾಗಿ ಹರಿಯಲಾರಂಭಿಸಿತು.

ಒಂದು ತಾಸು ಕಳೆಯಿತು. ಮನೋಹರನ ಕಾಲಸಪ್ಪಳವು ಕೇಳಲಾರಂಭಿಸಿತು. ಕೂಡಲೇ ಅವಳು ತನ್ನ ಕಣ್ಣುಗಳನ್ನು ಬೇಗಬೇಗನೇ ಒರಸಿಕೊಂಡು ನಿಂತುಬಿಟ್ಟಳು. ಮನೋಹರನು ಒಳಗೆ ಬಂದನು. ಅವನ ಕೈಯಲ್ಲಿ ಮುತ್ತಿನಿಂದಲೇ ಪೋಣಿಸಿದ ಆ ಮಂಗಲ ಆಭರಣವು ಶೋಭಿಸುತ್ತಿತ್ತು. ಅದನ್ನು ನೋಡಿದ ಮಲ್ಲಿಕೆಯ ಹೃದಯವು ನಡುಗಲಾರಂಭಿಸಿತು! ತಲೆಯನ್ನೆತ್ತಿ ಮನೋಹರನನ್ನು ನೋಡಲು ಕೂಡ ಅವಳಿಗೆ ಧೈರ್ಯಬರಲಿಲ್ಲ!

“ ರಾಕ್ಷಸೀ ! . . . . . ” . . . .

ಗದ್ಗದಿತ ಕಂಠದಿಂದ ಮನೋಹರನು ಅವಳನ್ನು ಉದ್ದೇಶಿಸಿ ಹೇಳಿದ. ಈ ಶಬ್ದವು ಅವಳ ಕಿವಿಗೆ ಬಿತ್ತು. ಯಾವಾಗಲೂ ಪ್ರೇಮದಿಂದ ಕರೆಯುತ್ತಿದ್ದ ಮನೋಹರನ ಈ ನಿಷ್ಠುರ ತಿರಸ್ಕಾರದಿಂದೊಡಗೂಡಿದ ಶಬ್

ವನ್ನು ಕೇಳುತ್ತಲೇ ಅವಳಿಗೆ ತನ್ನ ಕಿವಿಯಲ್ಲಿ ಕಾದ ಕಬ್ಬಿಣವನ್ನು ಹೊಯಿದಂತೆ ಭಾಸವಾಯಿತು. . . . .

"ರಾಕ್ಷಸೀ! ನನ್ನ ಸಾಧ್ವಿಯಾದ ಪತ್ನಿಯ ಕುತ್ತಿಗೆಯಿಂದ ಬಲಾತ್ಕಾರದಿಂದ ಅಪಹರಿಸಿದ ಈ ಸೌಭಾಗ್ಯದ ಅಲಂಕಾರವನ್ನು ತೆಗೆದುಕೊಂಡು ಸುಖಿಯಾಗು! ಕೇಳು! ಈ ಆಭರಣವನ್ನು ಇಲ್ಲಿ ತರಬೇಕಾದರೆ ಅಲ್ಲಿ ನಡೆದಿದ್ದ ಪ್ರಸಂಗಗಳನ್ನೆಲ್ಲವನ್ನು ಕೇಳು! ನಿನ್ನ ರೂಪಕ್ಕೆ ಬಲಿಯಾಗಿ, ಮರಣೋನ್ಮುಖಳಾಗಿದ್ದ ನನ್ನ ಪತ್ನಿಯು ಮುಖಾವಲೋಕನವನ್ನು ಕೂಡ ಕಳೆದ ಮೂರು ನಾಲ್ಕು ದಿನಗಳಿಂದ ಮಾಡಿರಲಿಲ್ಲ. ಅಂತೇ ಈ ಹೊತ್ತು ನಾನು ಅವಳ ಕೋಣೆಯೊಳಕ್ಕೆ ಹೋಗುತ್ತಲೇ ಅವಳಿಗುಂಟಾದ ಆನಂದವನ್ನು ಹೇಳಲಸಾಧ್ಯ! ನನ್ನನ್ನು ನೋಡಿ ಅವಳು 'ಈಶ್ವರನಿಗೆ ನನ್ನ ಮೇಲೆ ಕರುಣೆ ತೋರಿದುದರಿಂದಲೇ ನಿಮಗೆ ಈ ಹೊತ್ತು ನನ್ನ ನೆನಪಾಯಿತಲ್ಲವೇ?' ಎಂದು ಹೇಳಿದ ಪ್ರೇಮಯುಕ್ತವಾದ ಮಾತುಗಳಿಂದ ನನ್ನ ಮೇಲೆ ಏನೂ ಪರಿಣಾಮವಾಗಲಿಲ್ಲ! ಯಾವ ಹೇತುವಿನಿಂದ ನಾನು ಅವಳಿದ್ದಲ್ಲಿ ಹೋಗಿದ್ದೆನೋ ಅದನ್ನೇ ಆದಷ್ಟು ಬೇಗನೇ ಸಾಧಿಸುವ ಇಚ್ಛೆಯಿಂದ. ನಾನು ಕೂಡಲೇ ಅವಳೊಡನೆ ಪ್ರೇಮದ ನಾಟಕಕ್ಕೆ ಪ್ರಾರಂಭಮಾಡಿದೆ. ಅವಳ ಹಾಸಿಗೆಯ ಮೇಲೆಯೇ ಕುಳಿತುಕೊಂಡೆ. ಅವಳನ್ನು ಕಾಣುವು

ದಕ್ಕೆ ಬರಲು ಇಷ್ಟು ದಿನ ಅಸಾಧ್ಯವಾಗಿದ್ದುದಕ್ಕೆ ಅನೇಕ ಕಾರಣಗಳನ್ನು ಕಲ್ಪಿಸಿ ಹೇಳಿದೆ.

“ಅವಳ ದೇಹಪ್ರಕೃತಿಯ ವಿಷಯವಾಗಿ ಬಹಳ ಪ್ರೀತಿಯಿಂದ ಕೇಳುವಂತೆ ನಟಿಸಿದೆ ಹತಭಾಗಿನಿಗೆ ಇದರಿಂದಲೇ ಎಷ್ಟು ಆನಂದವಾಯಿತು! ಕಟ್ಟಕಡೆಗೆ ಈ ಮಂಗಲಸೂತ್ರವನ್ನು ಕೇಳಿದೆ. ಕೂಡಲೆ ಅವಳಿಗೆ ನನ್ನ ಪ್ರೇಮಸಂಭಾಷಣೆಯ ಕಾರಣವು ತಿಳಿಯಿತು. ಆಗಲೇ ಹರುಷದಿಂದ ಕೂಡಿದ ಅವಳ ಹೃದಯಕ್ಕೆ ದುಃಖದ ಪರಮಾವಧಿಯಾಯಿತು. ಕಣ್ಣೀರು ಸುರಿಸುತ್ತ ಬಹಳ ದೀನವಾಣಿಯಿಂದ ಅವಳು, ‘ಈ ಹೊತ್ತಿನ ವರೆಗೆ ನಿಮ್ಮ ಯಾವ ಅಡಚಣಿ ಸಮಯದಲ್ಲಾದರೂ ನೀವು ಬೇಡಿದ ಕೂಡಲೆ ಯಾವತ್ತು ಆಭರಣಗಳನ್ನು ಕೊಟ್ಟಿರುತ್ತೇನೆ. ನನಗೆ ಆಭರಣಗಳ ಮೇಲೆ ಮೋಹವಿಲ್ಲ. ಆದರೆ ನನ್ನ ಮೇಲೆ ಪ್ರೀತಿ, ದಯೆಯಿಟ್ಟು ಇದೊಂದನ್ನು ಮಾತ್ರ ಬಿಟ್ಟುಬಿಡಿರಿ. ಇದು ನನ್ನ ಸೌಭಾಗ್ಯದ ಚಿಹ್ನೆಯು! ಅದಲ್ಲದೆ ಮಾವಯ್ಯನವರು ತಮ್ಮ ಅವಸಾನ ಕಾಲದಲ್ಲಿ ನೆನಪಿಗೋಸ್ಕರ ಇದನ್ನು ನನಗೆ ಕೊಟ್ಟದ್ದುದರಿಂದ ಇದು ನನಗೆ ಅತ್ಯಂತ ಪ್ರಿಯವಾಗಿದೆ. ಈಶ್ವರನ ಕೃಪೆಯಿಂದ ಸುವಾಸಿನಿಯಾಗಿದ್ದ ಯಾವ ಸ್ತ್ರೀಯೂ ಇದನ್ನು ಕೊಡಲು ಸಮ್ಮತಿಸುವಳೆ? ನಾನಾದರೂ ಈ ಲೋಕದಲ್ಲಿ ಕೆಲವೇ ದಿವಸ ಇರು

ವೆನು. ಅಷ್ಟರ ವರೆಗೆ ಇದು ನನ್ನ ಕುತ್ತಿಗೆಗೆ ಇರಲಿ! ಆ ಮೇಲೆ ಅದನ್ನು ನೀವು ಬೇಕಾದ ಹಾಗೆ ಉಪಯೋಗಿಸಬಹುದಲ್ಲವೆ?' ಎಂದಳು

"ಅವಳು ಇಷ್ಟು ಹೇಳುತ್ತಿರುವಾಗಲೇ ಕೋಣೆಯು ಹೊರಗೆ ನನ್ನ ಚಿಕ್ಕಪ್ಪನ ಕಾಲಸಪ್ಪಳವು ಕೇಳಿ ಬಂತು. ಅವಳ ಆರೋಗ್ಯವನ್ನು ತಿಳಿಯಲು ಅವರು ಒಳಗೆ ಬರುತ್ತಿದ್ದರು ಅವರು ಒಳಗೆ ಬಂದರೆ ನನ್ನ ಹೇತುವು ಸಫಲವಾಗುವ ಸಂದರ್ಭವೇ ಇರಲಿಲ್ಲ. ನೀನಾದರೂ ನಿನ್ನ ಆಶೆಯನ್ನು ಇಷ್ಟು ದೃಢದಿಂದಲೂ, ಕಠೋರತನದಿಂದಲೂ ಕೇಳಿಕೊಂಡಿದ್ದುದರಿಂದ ನಾನು ವಿಳಂಬಮಾಡದೆ ನಿಷ್ಠುರನಾಗಿ ಅವಳ ಕುತ್ತಿಗೆಗೆ ಕೈ ಹಾಕಿದೆ! ಚಿಕ್ಕಪ್ಪನು ಕೋಣೆಯೊಳಗೆ ಬರುವ ಮೊದಲೇ ಮಂಗಲಸೂತ್ರವನ್ನು ಅಪಹರಿಸಿ ನಾನು ಹಿಂದಿನ ಬಾಗಲಿನಿಂದ ಓಡಿ ಇಲ್ಲಿಗೆ ಬಂದೆ! ತಿಳಿಯಿತೇ— ರಾಕ್ಷಸಿ!"

ಇಷ್ಟು ಹೇಳಿ ಮನೋಹರನು ಸುಮ್ಮನಾದನು ನಿಂತಲ್ಲಿಂದಲೇ ಕುಳಿತುಬಿಟ್ಟನು ಇಷ್ಟರಲ್ಲಿ ಹೊರಗಿನಿಂದ ಕಾಲಿನ ಸಪ್ಪಳವು ಕೇಳಬಂತು ಒಡನೆಯೇ 'ರಾಯರೇ! ರಾಯರೇ,' ಎಂಬ ಶಬ್ದಗಳೂ ಕೇಳಿದುವು. ಮನೋಹರನು ತನ್ನ ನೌಕರನ ಸ್ವರವನ್ನು ತಿಳಿದು ಕೂಡಲೇ ಹೊರಗ ಹೋದನು. ಅವನನ್ನು ನೋಡಿದ ಕೂಡಲೇ ಚಿಂತಾಕ್ರಾಂತರಾಗಿ ನಿಂತಿದ್ದ

ಇಬ್ಬರು ನೌಕರರು ಅವಸರದಿಂದ "ದೊಡ್ಡ ಧನಿ ಸಾಹೇಬರು ನಿಮ್ಮನ್ನು ಈಗಲೇ ಕರತರಲು ಹೇಳಿರು ವರು ಅಮ್ಮನವರು ಮೂರ್ಛಿತರಾಗಿ ಬಿದ್ದಿದ್ದಾರಂತೆ. ಅವರ ಅಂತಿಮ ಕಾಲವು ಬಂದಂತಿದೆ ಎಂದು ಡಾಕ್ಟರರೂ ಹೇಳಿರುವರಂತೆ" ಎಂದರು.

ಇದನ್ನು ಕೇಳಿದ ಕೂಡಲೇ ಚಕಾರ ಶಬ್ದವನ್ನೂ ಆಡದೆ ಮನೋಹರನು ನೌಕರರೊಂದಿಗೆ ಮಲ್ಲಿಕೆಯ ಮನೆಯಿಂದ ತ್ವರೆಯಾಗಿ ನಡೆದನು. ಸ್ವಲ್ಪ ಸಮಯದ ಹಿಂದೆ ಮನೋಹರನು ಹೇಳಿದ ಕರ್ಣಕಠೋರವಾದ ಕಥೆಯೂ, ನೌಕರರು ತಂದ ವರ್ತಮಾನವೂ ಮಲ್ಲಿಕೆಯ ಮನಸ್ಸಿನಲ್ಲಿ ವಿಲಕ್ಷಣ ಪರಿಣಾಮವನ್ನುಂಟು ಮಾಡಿದುವು. ಶೋಕ ಮತ್ತು ಭಯದಿಂದ ಅವಳ ಹೃದಯವು ಕರಗಲಾರಂಭಿಸಿತು. ಮನೋಹರನ ಹೋಗೋಣವನ್ನೇ ಉಪ್ಪರಿಗೆಯ ಕಿಟಕಿಯಿಂದ ದಿಟ್ಟಿಸಿ ನೋಡುತ್ತ ನಿಂತಳು! ನೋಡಿ ಭ್ರಮಿಷ್ಟಳಾದಳು! . . ಒಂದೆರಡು ನಿಮಿಷಗಳು ಕಳೆದುವು! . . . . . ಫಕ್ಕನೆ, ತಾನೂ ಮನೋಹರನ ಹಿಂದೆಯೇ ಹೋಗಬೇಕೆಂದು ನಿಶ್ಚಯಮಾಡಿದಳು! ಆವುದೊ ಒಂದು ಅದೃಶ್ಯ ಶಕ್ತಿಯು ಅವಳನ್ನು ಅಲ್ಲಿ ತೆಗೆದುಕೊಂಡು ಹೋಗುವಂತೆ ಭಾಸವಾಯಿತು. ಯಕ್ಷಿಣಿ ಮಂತ್ರಕ್ಕೆ ಬಲಿಯಾದವಳಂತೆ ಅವಳು ತನ್ನ ಮನೆ ಬಿಟ್ಟು

ಮನೋಹರನ ಹಿಂದೆಯೇ ನಡೆಯಲಾರಂಭಿಸಿದಳು. ಮನೋಹರನು ಮನೆ ತಲಪುವ ವರೆಗೆ ಅವನನ್ನು ದೃಷ್ಟಿಯಲ್ಲಿಯೇ ಇಟ್ಟುಕೊಂಡಳು

೧೪

ಲೋಕದಲ್ಲಿ ಕಲವು ಸಂಗತಿಗಳು ಅಕಲ್ಪಿತವಾಗಿ ನಡೆದುಹೋಗುತ್ತವೆ. ಇದರ ಕಾರಣವನ್ನು ಶೋಧಿಸುವುದೂ ಕಠಿಣವಾಗುತ್ತದೆ ಮನೋಹರನ ಹಿಂದೆಯೇ ಮಲ್ಲಿಕೆಯಾದರೂ ಏತಕ್ಕೆ ಹೋಗುತ್ತಿದ್ದಳೆಂದು ಅವಳನ್ನು ಕೇಳಿದ್ದರೆ ಉತ್ತರ ಸಿಗುವದು ಕಠಿಣವಾಗುತ್ತಿತ್ತು.

ಮನೋಹರನು ಪ್ರವೇಶಿಸಿದ ಮನೆಯೊಳಗೆ ಮಲ್ಲಿಕೆಯೂ ಪ್ರವೇಶಿಸಿದಳು. ಒಳಹೊಕ್ಕ ಕೂಡಲೇ ಯಾವ ದಿಕ್ಕಿನಿಂದ ಜನರ ಗಲಿಬಿಲಿಯು ಕೇಳಬರುತಿತ್ತೋ ಆ ಕಡೆಗೆ ಇವಳ ದೇಹವು ಹೋಗಲಾರಂಭಿಸಿತು. ಪಕ್ಕದ ಕೋಣೆಯಲ್ಲಿ ನಿಂತಿದ್ದ ಜನರ ಗುಂಪನ್ನು ನೋಡಿ ಎಚ್ಚತ್ತಂತಾದಳು. ಭೀತಿಗೊಂಡು ಸಮೀಪವೇ ಒಂದು ಮೂಲೆಯಲ್ಲಿ ನಿಂತುಕೊಂಡಳು.

ಬಹಳ ಹೊತ್ತಿನ ವರೆಗೆ ಡಾಕ್ಟರನು ಮನೋಹರನ ಪತ್ನಿಗೆ ನಾನಾತರದ ಉಪಚಾರಗಳನ್ನು ಮಾಡುವುದರಲ್ಲಿಯೇ ಮಗ್ನನಾಗಿದ್ದನು. ಅವನಿಗೆ ಬೇಕುಬೇಕಾದ

ಸಾಮಾನುಗಳನ್ನು ತಂದುಕೊಡಲು ನೌಕರರು ಒಳಗೂ ಹೊರಗೂ ಓಡುತ್ತಿದ್ದರು. ಕೆಲಹೊತ್ತಿನಲ್ಲಿ ಡಾಕ್ಟರನು ತನ್ನ ಉಪಚಾರಗಳನ್ನು ನಿಲ್ಲಿಸಿ ಹೊರಡಲು ಅನುವಾದನು. ಹೋಗುತ್ತಾ ಅಲ್ಲಿಯೇ ನಿಂತಿದ್ದ ವೃದ್ಧಗೃಹಸ್ಥನ ಕೂಡೆ "ಏನಾದರೊಂದು ಅವಳ ಇಚ್ಛೆಯ ವಿರುದ್ಧ ನಡೆದ ಭಯಂಕರ ಕರ್ತವ್ಯದ ಕಾರಣದಿಂದಲೇ ಅವಳ ಹೃದಯಕ್ಕೆ ಸಿಡಿಲು ಬಡಿದಂತಾಗಿದೆ. ನಿಮ್ಮ ಮತ್ತು ಅವಳ ಋಣಾನುಸಂಬಂಧವು ಇಂದಿಗೆ ತೀರುವಂತೆ ಈಶ್ವರೇಚ್ಛೆಯಿದೆಂದು ತೋರುವುದು. ಬಹಳವೆಂದರೆ ಇನ್ನು ಒಂದೆರಡು ತಾಸು! ಇಷ್ಟೆ ಅವಳ ಆಯುಷ್ಯ! ನಡುನಡುವೆ ಹೀಗೆ ಭ್ರಮಿಷ್ಟಳಾಗಿ ಏನೇನೊ ಮಾತನಾಡುತ್ತಿರುವಳು! ನೀವು ಮುಂದಿನ ವ್ಯವಸ್ಥೆಯನ್ನು ಮಾಡಿರಿ" ಎಂದು ಹೇಳಿ ಹೊರಟು ಹೋದನು.

ಇದನ್ನು ಕೇಳಿದ ಆ ವೃದ್ಧಗೃಹಸ್ಥನು ದೀರ್ಘವಾದೊಂದು ನಿಶ್ವಾಸವನ್ನು ಬಿಟ್ಟನು. ನೌಕರರನ್ನೆಲ್ಲಾ ಹೊರಕಳುಹಿಸಿ, ಒಬ್ಬನನ್ನು ಮಾತ್ರ ಅಲ್ಲಿ ಕುಳಿತಿರಲು ಹೇಳಿ ತಾನೂ ಹೊರಹೋದನು ಮನೋಹರನು ಅಲ್ಲಿಯೇ ಭ್ರಾಂತನಾಗಿ ಕುಳಿತುಬಿಟ್ಟನು. . . .

ಕೋಣೆಯ ಬಳಿಯ ಮೂಲೆಯಲ್ಲಿ ಮಲ್ಲಿಕೆಯು ಇನ್ನೂ ನಿಂತಿದ್ದಳು! ಮನೋಹರನ ಪತ್ನಿಯು ಜ್ಞಾನ

ಶೂನ್ಯಳಾಗಿ ಏನೇನೋ ಮಾತನಾಡುತಿದ್ದುದನ್ನು ಅವಳು ಕೇಳುತಿದ್ದಳು! ಇಷ್ಟರ ತನಕ ಅಲ್ಲಿ ನಿಂತಿದ್ದ ಮಲ್ಲಿಕೆಯನ್ನು ಮನೋಹರನು ನೋಡಿರಲಿಲ್ಲ. ಅವಳು ಇವನನ್ನು ಹಿಂಬಾಲಿಸಿ ಬಂದುದು ಅವನಿಗೆ ಗೊತ್ತಿರಲಿಲ್ಲ. ಈಗ ಅವಳನ್ನು ನೋಡಿದ ಕೂಡಲೇ ಕಾದ ಎಣ್ಣೆಗೆ ನೀರು ಹೊಯಿದಂತಾಗಿ ಅವನು ಕೋಪದಿಂದ ನಡುಗುತ್ತಾ ಅವಳ ಸಮೀಪಹೋಗಿ "ಪಾಷಾಣ ಹೃದಯಿಯೆ! ಅವಳ ಸೌಭಾಗ್ಯ ಅಲಂಕಾರಗಳನ್ನು ಹೀರಿಕೊಂಡರೂ ನಿನಗೆ ತೃಪ್ತಿಯುಂಟಾಗಲಿಲ್ಲವೇ? ಅವಳ ಪ್ರಾಣವು ಹೋಗುವುದನ್ನೂ ನೋಡಿ ಸಂತೋಷಪಡಬೇಕೆಂದು ಇಲ್ಲಿಯ ವರೆಗೆ ಬಂದಿರುವೆಯಾ? ನೋಡು! ಸಂತೋಷದಿಂದ ನೋಡು! ಆ ಮೇಲಾದರೂ ನಿನಗೆ ತೃಪ್ತಿಯಾದೀತು!" ಎಂದನು.

ಮಲ್ಲಿಕೆಯು ಪ್ರತ್ಯುತ್ತರವನ್ನು ಕೊಡದೆ ಸುಮ್ಮನೆ ನಿಂತಳು. ಇಷ್ಟರಲ್ಲಿ ಅವಳನ್ನು ಯಾರೋ ಕರೆದಂತಾಯಿತು. "ಮಲ್ಲಿಕಾ! ಮಲ್ಲಿಕಾ!" ಎಂಬ ಶಬ್ದಗಳು ಸ್ಪಷ್ಟವಾಗಿ ಅವಳಿಗೆ ಕೇಳಿಬಂದುವು. ಶಬ್ದಗಳಾದರೂ ಆ ಕೋಣೆಯ ಕಡೆಯಿಂದಲೇ ಬರುತ್ತಿದ್ದಂತೆ ಭಾಸವಾಯಿತು. ಇನ್ನೂ ಸಮೀಪಹೋದಳು! ತಿರುಗಿ ಅದೇ ಕೂಗು ಕೇಳಿತು! ಈಗ ಮಾತ್ರ ಭಾವನೆಯಲ್ಲವೆಂದು ಖಂಡಿತಮಾಡಿಕೊಂಡಳು. ತನ್ನನ್ನು ಯಾರು ಕೂಗು

ತ್ತಿರುವರೆಂಬುದು ಆಶ್ಚರ್ಯದಿಂದ ಮುಗ್ಧಳಾಗಿದ್ದ ಮಲ್ಲಿಕಗೆ ಫಕ್ಕನೆ ತಿಳಿಯಲಿಲ್ಲ "ಮನೋಹರನೊಬ್ಬನಿಗಲ್ಲದೆ ಇಲ್ಲಿ ನನ್ನ ಪರಿಚಯವು ಯಾರಿಗೂ ಇಲ್ಲ. ಅವನೇ ನನ್ನನ್ನು ಕರೆಯುತ್ತಿರಬಹುದೇ?" ಎಂಬ ವಿಚಾರವು ಬಂದು ಕೂಡಲೇ ಅವಳು ಕೋಣೆಯ ಒಳಗೆ ಹೋದಳು. ಕೋಣೆಯ ಒಂದು ಪಕ್ಕದಲ್ಲಿ ಮಂಚದ ಮೇಲೆ ಮಲಗಿ ನರಳುತ್ತಿದ್ದ ಸ್ತ್ರೀಯೊಬ್ಬಳ ಹೊರತು ಬೇರೆಯಾರೊಬ್ಬರೂ ಕಂಡುಬರಲಿಲ್ಲ!

ಪುನಃ "ಮಲ್ಲಿಕಾ! ಮಲ್ಲಿಕಾ!" ಎಂಬ ಶಬ್ದಗಳು ಕೇಳಿಬಂದುವು. ರೋಗಿಯ ಬಾಯಿಯಿಂದಲೇ ಈ ಶಬ್ದಗಳು ಬರುತ್ತಲಿವೆ ಎಂದು ಈಗ ಮಾತ್ರ ಅವಳಿಗೆ ತಿಳಿಯಿತು. ಅವಳಾದರೂ ಆಶ್ಚರ್ಯಪಟ್ಟು "ಅವಳು ನನ್ನನ್ನೇ ಉದ್ದೇಶಿಸಿ ಕರೆಯುತ್ತಾಳೆಯೋ ಅಥವಾ ನನ್ನ ಹೆಸರಿನ ಬೇರೆ ಸ್ತ್ರೀಯಳು ಇಲ್ಲಿರಬಹುದೇ?" ಎಂದು ಆಲೋಚಿಸುತ್ತಾ ಅವಳ ಮುಂದಿನ ಮಾತುಗಳನ್ನು ಕೇಳಬೇಕೆಂಬ ಉತ್ಸುಕತೆಯಿಂದ ರೋಗಿಯ ಹತ್ತಿರವೇ ಹೋಗಿ ನಿಂತುಬಿಟ್ಟಳು. ಮನೋಹರನೂ ಹೋಗಿ ಅವಳ ಹಿಂದೆಯೇ ನಿಂತುಕೊಂಡನು. ಐದು ಆರು ನಿಮಿಷಗಳಾದರೂ ಅವೇ ಶಬ್ದಗಳ ಹೊರತು ಅವಳಿಗೆ ಬೇರೇನೂ ಕೇಳಲಿಲ್ಲ ಕಡೆಗೆ ರೋಗಿಯು ಬಹಳ ಕಷ್ಟದಿಂದ ಈ ಕೆಳಗಿನ ಮಾತುಗಳನ್ನಾಡಲು

ಮೊದಲು ಮಾಡಿದಳು ಅವಳಾಡಿದ ಪ್ರತಿ ಒಂದು ಶಬ್ದವೂ ಮಲ್ಲಿಕೆಯ ಹೃದಯಕ್ಕೆ ವಿಪರೀತ ವೇದನೆಯನ್ನು ಕೊಡುತಿತ್ತು.

"ಮಲ್ಲಿಕೆ! . . ಮಲ್ಲಿಕೆ! . ಎಷ್ಟು ವರ್ಷಗಳ ಮೇಲೆ ಭೇಟಿಯಾಗುತ್ತೀಯೇ? . . . ಇಷ್ಟು ಕಾಲ ನೀನು ಎಲ್ಲಿ ಇದ್ದೀ? . . . "

ಮನೋಹರನಿಗೆ ಆಶ್ಚರ್ಯವಾಯಿತು! ಆದರೂ ಅವನು ಸಮಾಧಾನದಿಂದ ಕೇಳುತ್ತ ನಿಂತುಕೊಂಡನು.

". . . . ನಿಜವಾಗಿ ಹೇಳು ಇಷ್ಟು ದಿನಗಳಲ್ಲಿ ಒಂದು ಸಲವಾದರೂ ನಿನಗೆ ನನ್ನ ನೆನಪಾಗಿದೆಯೆ? ನನಗೆ ಮಾತ್ರ ನಿನ್ನ ಮರವು ಆಗಲೇ ಇಲ್ಲ. ಅದರಲ್ಲೂ ಈಗ ನಿನ್ನನ್ನು ನೋಡಿದ ಕೂಡಲೇ ಇಂತಹ ಆಪತ್ಕಾಲದಲ್ಲಿಯೂ ನನಗೆ ಎಷ್ಟು ಸುಖವಾಯಿತು! . . . . ಏನು ಹೇಳಿದಿ? ನನ್ನ ಮೇಲೆ ಬಂದ ಆಪತ್ತೇನೆಂದು ಕೇಳಿದಿಯಾ? ನಾನು ಇದುವರೆಗೆ ಯಾರ ಹತ್ತಿರವೂ ಹೇಳಿರಲಿಲ್ಲ. ನಿನಗೆ ಎಲ್ಲವನ್ನೂ ಹೇಳಿಬಿಡುತ್ತೇನೆ! . . . ಅಹುದು. ನನ್ನ ಮನಸ್ಸಿನಲ್ಲಿ ಕುದಿಯುತ್ತಿರುವುದನ್ನು ನಿನ್ನೊಡನೆ ಹೇಳದೆ ಇನ್ನಾರೊಡನೆ ಹೇಳಲಿ? . . . ಆದರೆ ಒಂದು ಸಂಗತಿಯು ಮಾತ್ರ ನಿನ್ನ ಲಕ್ಷ್ಯದಲ್ಲಿರಲಿ! ಇದನ್ನು ಯಾರ ಹತ್ತಿರವೂ ಹೇಳಲಾಗದು! . . ನನ್ನಾಣೆ ಇದೆ! . . . ನನ್ನ ಯಜ

ಮಾನರೇ ಮಾಡಿದ ಈ ನೀಚಕೃತ್ಯವನ್ನು ನಾನು ನೋಡಿ ಹೇಗೆ ಸಹಿಸಲಿ! ಕೇಳು! ಮಾವಯ್ಯನವರು ಸ್ವರ್ಗಸ್ಥರಾದ ಮೇಲೆ ಅಂದರೆ ಒಂದು ವರುಷದ ಹಿಂದೆ ಮೈಸೂರನ್ನು ಬಿಟ್ಟು ಇಲ್ಲಿ ಬಂದೆವು. ಪ್ರಾರಂಭದ ಕೆಲವು ತಿಂಗಳುಗಳನ್ನು ಸುಖದಲ್ಲಿ ಕಳೆದೆನು. ಆ ಬಳಿಕ ನನ್ನ ಪೂರ್ವಜನ್ಮದ ಯಾವ ಪಾತಕವು ಎದುರಿಗೆ ಬಂದು ನಿಂತಿತೆಂಬುದು ಈಶ್ವರನೇ ಬಲ್ಲ! ಪತಿಯವರ ಗುಣದಲ್ಲಿ ಘಕ್ಕನೆ ಬದಲಾವಣೆಗಳುಂಟಾದುವು. ದಿನ ಹೋಗುತ್ತಾ, ಹೋಗುತ್ತಾ ಅವರ ದರ್ಶನ ಸಿಗುವುದೇ ಕಠಿಣವಾಗುತ್ತ ಬಂತು. ಅವರಿಂದ ಒಂದಾದರೂ ಸವಿಮಾತು ಕೇಳದೆ ಹೋದೆ. ಇದೇ ರೀತಿ ನಡೆಯುತ್ತಲೇ ಇತ್ತು. ನನ್ನಿಂದ ಆದ ಅಪರಾಧವೇನೆಂದು ನನಗೇ ಗೊತ್ತಿಲ್ಲ ಇದರಿಂದ ನಾನು ಬಹಳ ಕೊರಗುತ್ತಿದ್ದೆನು. ಆದರೆ ಯಾರ ಹತ್ತಿರ ಹೇಳಲಿ? ಹೇಳುವಂತಹ ವಿಷಯವೂ ಅಲ್ಲ! . . . ಅದಾದ ಮೇಲೆ ನನ್ನ ಮಗು ಜನ್ಮವೆತ್ತಿತು. ಅವನ ನಗುಮುಖವೋ, ಗೌರವರ್ಣವೋ, ಆಟಗಳೋ ಈಗಲೂ ನನ್ನ ಕಣ್ಣಿಗೆ ಕಟ್ಟಿದಂತಿವೆ! ಸಾಕ್ಷಾತ್ ನಕ್ಷತ್ರವಾಗಿತ್ತು ನನ್ನ ಮುದ್ದು! ಆದರೆ ನಿಷ್ಠುರ ದೈವವು ನನಗಾಸುಖವನ್ನು ಹೆಚ್ಚು ದಿನ ಅನುಭವಿಸಲು ಬಿಡಲಿಲ್ಲ! ಅವನ ಜನ್ಮವಾದಂದಿನಿಂದ ನಾನು ಹಾಸಿಗೆ ಹಿಡಿದು ಮಲಗಿಬಿಟ್ಟೆ.

ಅವನ ತಂದೆಯವರಾದರೂ ಅವನ ಯೋಗಕ್ಷೇಮ ನೋಡುವರೆಂಬ ಒಂದು ಮಹತ್ವಾಕಾಂಕ್ಷೆಯು ನನ್ನಲ್ಲಿತ್ತು ನೀನು ನಿಜವೆಂದು ನಂಬುತ್ತೀಯೊ ಇಲ್ಲವೊ, ಅವನು ಹುಟ್ಟಿದಾರಭ್ಯ ಒಂದೇ ಒಂದು ದಿನವಾದರೂ ಅವರು ಅವನನ್ನು ತಮ್ಮ ತೊಡೆಯ ಮೇಲೆ ಕುಳ್ಳಿರಿಸಿ ಮುದ್ದಾಡಿಸಲಿಲ್ಲ! ಇಂತಹ ಸ್ಥಿತಿಯಲ್ಲಿ ಮಾತಾಪಿತೃರ ಶುಶ್ರೂಷೆಯಿಲ್ಲದ ಆ ಹಸುಳೆಯು ಎಷ್ಟು ಚೆನ್ನಾಗಿದ್ದೀತು? ನೀನೇ ಹೇಳು, ಮಲ್ಲಿಕೆ! . . ಅಂತಹ ಶಿಶುವನ್ನು ನೌಕರಚಾಕರರ ವಶಕೊಟ್ಟರೆ ಅವರೇನು ಪ್ರೀತಿಯಿಂದ ನೋಡುತ್ತಾರೆಯೆ? . ಆಯಿತು. . . . ಕಾಹಿಲೆಯಾಯಿತು . ಆ ನನ್ನ ಭಾಗ್ಯವು . ನನ್ನ ಮುದ್ದು ಹಸುಳೆಯು ನನ್ನನ್ನು . ಬಿಟ್ಟು ಹೋಯಿತು! .

"ಇಷ್ಟಾದರೂ ಅವರು ನನ್ನ ಹತ್ತಿರ ಮೊದಲಿನಂತೆ ಇದ್ದು ನನ್ನನ್ನು ಸಮಾಧಾನಮಾಡಲು ಪ್ರಯತ್ನಿಸಲಿಲ್ಲ! ಏನಾದರೂ ಆಭರಣಗಳು ಬೇಕಿದ್ದರೆ ಮಾತ್ರ ಸವಾರಿಯು ನನ್ನ ಹತ್ತಿರ ಬಂದು ಸುಳ್ಳು ಪ್ರೇಮದ ಮಾತುಗಳನ್ನಾಡುವುದು, ಆಭರಣಗಳನ್ನು ತಗೆದುಕೊಂಡು ಹೋಗುವುದು! ಇದೇ ರೀತಿ ನಡೆಯುತಿತ್ತು. . . . ಇಲ್ಲ! ಇಷ್ಟರಲ್ಲಿಯೇ ನನ್ನ ದುಃಖವು ಸಮಾಪ್ತಿಯಾಗಲಿಲ್ಲ! ಕಟ್ಟಕಡೆಗೆ ಅವರು ಮಾಡಿದ

ಅಮಂಗಲ ಕಾರ್ಯವನ್ನು ಹೇಳಿದ್ದಲ್ಲಿ ನಿನಗೆ ರೋಮಾಂಚವಾಗದೆ ಇರಲಾರದು, ಮಲ್ಲಿಕೆ! ಅವರು ಇಂದು ಬಂದು ನನ್ನ ಕುತ್ತಿಗೆಯಲ್ಲಿದ್ದ ಮಂಗಲಸೂತ್ರವನ್ನೇ ಬಲಾತ್ಕಾರದಿಂದ ಸೆಳೆದುಕೊಂಡು ಹೋದರು!

"ಈ ಎಲ್ಲಾ ಕೃತ್ಯಗಳಿಂದ ನನ್ನ ಹೃದಯಕ್ಕೆ ಎಷ್ಟು ವೇದನೆಯಾಗಿರಬಹುದೆಂದು ನೀನೇ ಊಹಿಸು! . . . . . . . ಮಲ್ಲಿಕೆ! ಇದೇನು! ನೀನೇತಕ್ಕೆ ಅಳುವಿ? ಅಂತು ಚಿಕ್ಕ ಬಾಲಿಕೆಯಾಗಿದ್ದಾಗ ನಿನ್ನಲ್ಲಿದ್ದ ಅಜ್ಞಾನವು ಇನ್ನೂ ಹೋಗಿಲ್ಲವೆ? ನನಗೆ ಇನ್ನೂ ಜ್ಞಾಪಕದಲ್ಲಿದೆ . . . ಒಂದು ದಿನ ಚಿಕ್ಕಮ್ಮನು ಹೊಡೆದುದರಿಂದ ನಾನು ಮಹಾಲಿಂಗೇಶ್ವರ ದೇವಸ್ಥಾನದ ಕೆರೆಯ ಮೆಟ್ಟಲ ಮೇಲೆ ಅಳುತ್ತಾ ಕೂತಿದ್ದೆ. ಅಷ್ಟರಲ್ಲಿ ನೀನು ಬಂದು ನಾನಳುವುದನ್ನು ನೋಡಿ ಅತ್ತಿದ್ದಿಯಲ್ಲವೆ? ಆ ಸಮಯ ನೀನಂದ ಮಾತುಗಳನ್ನು ನಾನು ಹೇಗೆ ಮರೆತೇನು? . . . . 'ನೀನು ಕಷ್ಟದಲ್ಲಿಯೂ ದುಃಖದಲ್ಲಿಯೂ ಇದ್ದರೆ ನನಗೂ ದುಃಖವಾಗುವುದು, ನೀನು ಅತ್ತರೆ ನನಗೂ ಅಳುಬರುವುದು' ಎಂದು ನೀನೇ ಹೇಳಿದ್ದೆಯಲ್ಲವೆ? . . . . . . ಮಲ್ಲಿಕೆ! ಆಗ ನಿನ್ನಲ್ಲಿದ್ದ ಕೋಮಲತೆಯು ಈಗಲೂ ಸ್ಥಿರವಾಗಿಯೇ ಇದೆ! ನೀನು ಎಷ್ಟು ಪ್ರೇಮಭರಿತಳು, ಮಲ್ಲಿಕೆ! . . ."

ಶೋಕಾಕುಲಳಾಗಿ ನಡುನಡುವೆ ದುಃಖದ ವೇಗವನ್ನು ಸಹಿಸಿಕೊಂಡು ಮಾತನಾಡುತ್ತಿದ್ದ ಮನೋಹರನ ಪತ್ನಿಯ ತುಟಿಗಳು ಫಕ್ಕನೆ ಮುಚ್ಚಿಹೋದುವು! ಇಷ್ಟು ಹೊತ್ತಿನ ವರೆಗೆ ಅಲ್ಪಸ್ವಲ್ಪ ಚಲಿಸುತಿದ್ದ ಅವಳ ದೇಹವು ನಿಶ್ಚಲವಾಯಿತು! ಬಹಳ ಕಷ್ಟದಿಂದ ಶ್ವಾಸೋಚ್ಛ್ವಾಸಗಳನ್ನು ತೆಗೆದುಕೊಳ್ಳುತ್ತಿದ್ದವಳು ಈಗಒಂದನ್ನಾದರೂ ತೆಗೆದು ಕೊಳ್ಳುವಂತ ತೋರಲಿಲ್ಲ! . . . .

“ಚಂಪೆ! ಚಂಪೆ!” ಎಂದು ಮಲ್ಲಿಕೆಯು ತುಂಬಿದ ಕಂಠದಿಂದ ಅಸ್ಪಷ್ಟವಾಗಿ ಅರಚಿದಳು. ಒಂದು ಗಳಿಗೆಗೆ ಮೊದಲೇ ಪ್ರಾಣೋತ್ಕ್ರಮಣೆಯಾಗಿದ್ದ ಚಂಪೆಯ ದೇಹವನ್ನು ಅವಳು ಗಟ್ಟಿಯಾಗಿ ಆಲಿಂಗಿಸಿ, ತನ್ನ ಅಶ್ರುವಿನಿಂದಲೇ ಅದನ್ನು ಸ್ನಾನಮಾಡಿಸಿದಳು! . . . . .

“ಚಂಪೆ! ನಿನ್ನ ಸಂಸಾರಸುಖದಲ್ಲಿ ವಿಷವನ್ನು ಬೆರಸಿದ ಚಂಡಾಲಿನಿಯು ನಾನೇ! ನಿನ್ನ ಪ್ರಾಣಕ್ಕಿಂತಲೂ ಪ್ರಿಯವಾದ ನಿನ್ನ ಪತಿಯನ್ನು ನಿನ್ನಿಂದ ದೂರಮಾಡಿದ ನೀಚಕೃತ್ಯವನ್ನು ಮಾಡಿದವಳೂ ನಾನೇ! ಪಿತೃಪ್ರೇಮದಿಂದ ದೂರ ಸೆಳೆದು ನಿನ್ನ ಮಗುವನ್ನು ಬೀ ತೆಗೆದುಕೊಂಡವಳೂ ನಾನೇ ಇದ್ದೇನೆ! ಕೊನೆಗೆ ಬಲಾತ್ಕಾರದಿಂದ ನಿನ್ನ ಹೃದಯವನ್ನು ಒಡೆದು ನಿನ್ನನ್ನು ಮೃತ್ಯುವಿನ ಬಾಯಿಯಲ್ಲಿ ನೂಕಿದವಳೂ ನಾನೇ ಆಗಿರುವೆನು! . . . . . . ಹೇಳು! ಯಾವ ಪ್ರಾಯ

ಶ್ಚಿತ್ತದಿಂದ ಈ ಅಭಾಗಿನಿಯು ಮಾಡಿದ ಪಾಪ ಕೃತ್ಯದ ಪರಿಹಾರವಾದೀತು! ಯಾವ ತರದ ಶಿಕ್ಷೆಯಾದರೂ ನಾನು ಮಾಡಿದ ಘೋರಕೃತ್ಯಗಳಿಗೆ ನನಗೆ ಅಲ್ಪವಾದೀತು! . . . . . . ಇದೇ ರೀತಿ ಇನ್ನೆಷ್ಟು ಮಂದಿ ಸುವಾಸಿನಿಯರ ಸಂಸಾರಸುಖ ಸೌಭಾಗ್ಯಗಳು ನನ್ನಿಂದ ವಿಷಬೆರೆತು ಹೋದಾವೆಂದು ಯಾರಿಗೆ ಗೊತ್ತು? . . . ನನ್ನಂತಹ ಹತಭಾಗಿಯ ಆಯುಷ್ಯವು ಈ ದಿನವೇ ಸಮಾಪ್ತಿಯಾದರೆ ಮುಂದಾಗಲಿಕ್ಕಿರುವ ಅನರ್ಥಗಳನ್ನಾದರೂ ತಪ್ಪಿಸಿದಂತಾಗುವುದಲ್ಲವೆ? . . . . "

ಇಷ್ಟನ್ನು ಹೇಳಿ ಮಲ್ಲಿಕೆಯು ಸಮೀಪವಿದ್ದ ಕಪಾಟನ್ನು ತೆರೆದು ಅದರಲ್ಲಿದ್ದ ಸೀಸೆಗಳಲ್ಲೊಂದನ್ನು ಹೆಕ್ಕಿ ತೆಗೆದಳು. ಇದನ್ನು ಕಂಡ ಮನೋಹರನು ಮಿಂಚಿನಂತೆ ಹೋಗಿ ಅವಳ ಕೈಯಲ್ಲಿದ್ದ ಸೀಸೆಯನ್ನು ಕಿತ್ತುಕೊಳ್ಳುವಷ್ಟರಲ್ಲಿ ಅವಳು ಅದರಲ್ಲಿದ್ದ ವಿಷವನ್ನು ಕುಡಿದೇ ಬಿಟ್ಟಳು!

ಈ ರೀತಿಯಿಂದ ಆಗ ತಾನೆ ಅರಳಿದ ಮಲ್ಲಿಕಾ ಚಂಪಕಗಳೆಂಬ ಎರಡು ಹೂವುಗಳನ್ನೂ ದುಷ್ಟ ಕಾಲನು ಒಮ್ಮೆಯೇ ಕಿತ್ತುಕೊಂಡು ಹೋದನು!